ದಿಸಿದುದು ಶೀತಪ್ರಭೆಯೊಳಖಿಳದೇವಾಸುರರನಳವಳಿಸುತ ॥ ೨೧ ॥
ಕುಗ್ಗಿದವು ಜನರಕೈಕಾಲ್ಗಳತಿಶೀತದಿಂ। ನೆಗ್ಗಿದವು ಮನದಹಂಕಾರಂಗ
ಳಾಕ್ಷಣಂ। ತಗ್ಗಿದವು ದಿವಿಜರಮನೋರಥವಿಷಕ್ಕಧಿಕಭೀತಿಯಿಸಿತಿ
ಲ್ಲವೆಂದು॥ ಸಗ್ಗಿಗರು ದೇವನಂ ಪೊಗಳಲಾಗಳ್ಬಂದು। ವೆಗ್ಗಳಿಪ ಶೀತಕರ
ನೀರೆಂಟು ಭಾಗದೊಳು॥ ಬಗ್ಗದೊವಲುಡಿಯನೊಂದಂ ತಳೆದು ಚಂದ್ರ
ನಂ ನೋಡಿ ಮತ್ತಿಂತೆಂದನು ॥ ೨೨ ॥ ಇಂದು ನೀನಿನ್ನುಳಿದಕಲೆಯ
ನೋಷಧಿದೈವ। ಬೃಂದವಂ ಪೊರೆವುತಂಬರದೊಳಗೆರಡು ಲಕ್ಷಮೊಂ
ದೆನಿಪ ಯೋಜನದೊಳಿರುವುದೆಂದಭವ ತಾಂ ಕೈಲಾಸಮಂ ಪೊಕ್ಕನು॥
ಅಂದು ದೇವಾಸುರರು ಪರಿತೋಷಮನರಾಗಿ। ಮಂದರದೊಳಾರ್ಭ
ಟಸಿ ಕಡೆಯಲ್ಕೆ ಪುಟ್ಟಿದವು। ಚಂದಚಂದದವಸ್ತುಗಳು ಶಿವನಕರುಣಮಿ
ರಲಾವುದಘಟಿತವೆಂಬುದು ॥ ೨೩ ॥ ಸಿರಿ ದಿವಿಜಕರಿ ಕಾಮಧೇನು ಕಲ್ಪ
ದ್ರುಮಂ। ಪರಮಚಿಂತಾರತ್ನಮಮೃತಮತಿಚಾಪಳದ। ಸುರಹ
ಯಂ ತಾರೆ ಸುರಕಾಮಿನೀಸಂದೋಹಧನ್ವಂತ್ರಿಮುಖ್ಯರುದಿಸೆ॥ ಸಿರಿ
ಯನಬುಜೋದರಂ ಕೊಂಡು ಮಿಕ್ಕವನೆಲ್ಲ। ಸುರಪತಿಗೆ ಕೊಟ್ಟು ಕ
ಳುಪುವಸಮಯದೊಳು ದೈತ್ಯ। ರುರುತರದ ಪೀಯೂಷಕಲಶಮಂ ಕೆ
ಡೆಪ್ಪುದ್ದರೇನೆಂಬೆನಚ್ಚರಿಯನು ॥ ೨೪ ॥ ಕೋಡಿಗುದುಮನಮತಿಭ್ರ
ಮೆಯಾಯ್ತು ಬುಟ್ಟಿಜಟ್ಟೋಂ। ಡಿದುದಹಂಕಾರಮುಳಿದುದು ಚಿತ್ತ
ವಿಸಾ। ಕೂಡಿದಸುರಾಳಿಯುಚ್ಚರು ಹೆಹರಿಖಳಿರಿದರ್ವಸದೊಳಗೆ ಕಾಂ
ತೆಯಾಗಿ॥ ಗಾಡಿಯಿಂ ವಕ್ರರದು ದೈತ್ಯರಕರದ ಕಳಶಮಂ। ಕೋಡಿಯಿಂ
ಕೊಂಡವರುಗಳು ಸಹಿತಲೈತಂದು। ನೀಡಿದಂ ಸಾಗರದ ತಡಿಯೊಳೆ
ಮರಾಸುರರ್ಗಮೃತಕಾದಂಬರಿಗಳಂ ॥ ೨೫ ॥ ಹರಿಯ ಕಪಟವನರಿ
ದು ಸೈಂಹಿಕೇಯಂ ಬಂದು। ಸುರರ ಪಂತಿಯೊಳೊಂದಿ ಕುಳ್ಳಿರಲು ಸುಧೆ
ಯನೀ। ಹರಿಯರಿಯೆ ಹರಿಹರಿಗಳಿದನರಿದು ಹರಿಗುಸುರೆ ಹರಿಚಕ್ರದಿಂ
ದರಿಯಲು॥ ಶಿರಮುಂಡಗಳು ರಾಹುಕೇತುವಾದವು ಪೂರ್ವ। ದುರುವಿ
ರೋಧಂ ಚಂದ್ರಸೂರ್ಯರ್ಗವರ್ಗೆಯುಂ। ಬರಮಾದುದೀಗಳುಂ ಕೇಳೆಂ
ದು ರಾಮಂಗೆ ಚನ್ನಬಸವಂ ಪೇಳ್ದನು ॥ ೨೬ ॥ ಇಂತೆಸೆವ ಚನ್ನಬಸವೇಶ್ವ
ರಪುರಾಣಮಂ। ಸಂತಸದಿ ಬರೆದವರ್ಗೋದಿದರ್ಗರ್ಥವಾ। ದ್ಯಂತಮಂ ಬಿ
ಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸು
ಖಮಂ ಸಕಲಭೋಗಮನ। ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವ
ನಾ। ಕಂತುಹರನಪರಾವತಾರನೆನಿಸುವ ಚನ್ನಬಸವೇಶನಕ್ಕರಿಂದಂ॥

ಎರಡನೆಯ ಕಾಂಡದಲ್ಲಿ ೧೧ನೇ ಸಂಧಿ ಮುಗಿಯಿತು.

## ೧೨ನೇಸಂಧಿ.

ಸೂಚನೆ॥ ಸುರಪಾಲನಾಭವನಸಂಹಗೆಯನೊಲವಿಂಕೇಳೆ। ಹರ
ನಹಣೆಗಣ್ಣಿಡಿಯೆ ಶರಧಿಗಂಸುತನಾಗಿ। ವರಜಲಂಧರನೆಂಬನಾ
ಮದಿಂಸುರಪುರಕೆದಂಡೆತ್ತಿನಡೆತಂದನು॥

ಪದ॥ ಅಭ್ರಗವನೇಂದ್ವಗ್ನಿವಿಭ್ರಾಜಿತಾಕ್ಷಲೋ। ಲಭ್ರಮರನಿಭ
ಗರಳಶುಭ್ರವಿಗ್ರಹವಧೂ। ವಿಭ್ರಮಾಲೋಕದೈತ್ಯಭ್ರಷ್ಟಸುಮದವಿ
ಪೃಥ್ವಾಭ್ರಪ್ರಚಂಡಪವನ॥ ಆಭ್ರಾಂತರಾಳಗಂವಿಭ್ರಾಂತಚಾರುತರ।
ಶುಭ್ರಾಂಶುಕೋಟಿಕಾಂತಿಶ್ರಿತಶರೀರರುಚಿ। ರಭ್ರೂಲತಾಶೋಭಿ
ಪಂಪಾವಿರೂಪಾಕ್ಷತ್ರಿಬ್ರದಿಂಸಲಹೆಮ್ಮನು॥೧॥ ಆಲಿಸಿನ್ನೆಲೆಸಿದ್ಧರಾ
ಮದಿವಿಜೇಶ್ವರಂ। ಭಾಳಲೋಚನನಂಘ್ರಿಪೂಜಾಫಲಾಳಿಯಿಂ। ಪಾ
ಲಿಸುತಸುರಲೋಕದೊಳ್ಸುಖದೊಳಿರುತಿರಲುದಾಯಾದ್ಯಸಂಬಂಧ
ದ ಪಾಲಿಗೋಸುಗದನುಜರಂದುಯುದ್ಧವಮಾಡೆ। ಕಾಳಗದೊಳವ
ರೆಲ್ಲರಂಗೆಲ್ದುಸುಖಮಿರದೆ। ಕಾಲಹರನಡೆಗೆಹಗೆಯಂಕೇಳ್ವೆನೆಂದು
ಪೊರಮಟ್ಟನತ್ಯುತ್ಸವದೊಳು॥೨॥ ಬಂದುಕೈಲಾಸವಾಸಸ್ಥಾನದೊಳು
ಸಕಲಗಣ। ಬೃಂದಸಹಿತೋದ್ಘೋಲಗದೊಳಿರ್ಪಶಿವನಡಿಗೆ। ವಂದಿಸಿ
ಮಹಾಭಕ್ತಿಯಿಂದೆಬಿಂನವಿಸಿದಂಮುಕುಟತಟಹಸ್ತನಾಗಿ॥ ಇಂದು
ಶೇಖರನೆಕರುಣಿಸುವುದೆಂನೊಡನಾಂತು। ನಿಂದುಕಾದುವಸಮರ್ಥ
ನನೆನಲುನಸುನಕ್ಕು। ಮುಂದರಿಯದಿಂತುನುಡಿಯಲ್ಬೇಡವೆನೆಸುರ
ಪನಭವನೊಡನಿಂತೆಂದನು॥೩॥ ಜಂಭಬಲನಮುಚಿವೃತ್ರಾದಿಖಳ
ರಂಕದನ। ಕುಂಭಿನಿಯೊಳೋಡಿಸಿದೆನಂಟನಿಂಸಮರಸಂ। ರಂಭವೇ
ಕನಸಾಯ್ತುಸರ್ವದಾನನಗೊಬ್ಬಶತ್ರುವಂಕರುಣಿಸೆನಲು॥ ಜಂಭಾ
ರಿನುಡಿದಹುಂಕಾರವಂಕೇಳ್ದುಕೋಪ। ಸಂಭರದೊಳುಬ್ಬರಿಸಿಸುರ
ಪಾಲನಂಸುಡಲು। ಶಂಭುಫಾಳಾಂಬಕಜ್ವಾಲೆಯೊಳಗೊಂದುಕಿಡಿ
ಯವಾರ್ಧಿಯದುಗುಳಿಸಿದನು॥೪॥ ಸಾಕುಸಾಕೆಲೆಮಹಾದೇವದೇವೇ
ಶಕರು। ಣಾಕರಕೃಪಾಬ್ಧಿಶಂಕರಶರ್ವನೀಂಮುನಿಯೆ। ಪಾಕ
ಶಾಸನನದೆಂದಕ್ಷನೇಕಿಡಿಯನುಪಸಂಹರಿಸಬೇಕೆನುತ್ತ॥ ನಾಕ
ವಾಸಿಗಳ್ಗುರುಶಿವನಡಿಗೆನಮಿಸೆಬಳಿ। ಕಾಕಿಡಿಯನೀಶ್ವರಂಹಸ್ತ
ದೊಳುಪಿಡಿದುರ। ತ್ನಾಕರಕೆಬಿಸುಟಂದ್ರಶತ್ರುವಂಕೊಟ್ಟೆವಾಂ
ಪೋಗೆನುತಬೀಳ್ಕೊಟ್ಟನು॥೫॥ ಇತ್ತಲಮರೇಂದ್ರನಭವನನಿರದೆ
ಬೀಳ್ಕೊಂಡು। ಚಿತ್ತದಾನಂದದಿಂಸುರಪುರಕೆನಡೆತಂದ। ನತ್ತಲಾಹರ
ನಿಟ್ಟಕಿಡಿಬಾಲನಾಗಿಗಂಗಾಸಿಂಧುಸಂಗಮದೊಳು॥ ಬಿತ್ತರದೊಳಳ್ತು

ತಿರಲುಶುಂಭನೆಂದಾತ್ಮಜಂ। ಸತ್ತುಹೋಗಲುಸುರಪನೆಂಗೆಲ್ವಕುವ
ರನಂ। ಪೆತ್ತಪೆನೆನುತ್ತ ಶಿವನಂಕೂತುರ್ಗ್ರತಪಿಸುತ್ತೆ ಶರಧಿಸುತನಂಕಂ
ಡನು ೬॥ ಹರುಷದಿಂದಾಶಿಶುವನೆತ್ತಿ ತೊಡೆಯೊಳಗಿರಿಸೆ। ಸರಸಿಜ
ಭವಾಂಡವೊಡವಂತೆ ಶಿಶುಕೂಗಲಾ। ಸರದಬಳಿವಿಡಿದೆಲ್ಲೆಯುದುಬೊ
ಬ್ಬೆಯೆನುತಜಂಬಾಲನಿದ್ದಲ್ಲಿಗೈದೆ॥ ಪರಮೇಷ್ಠಿಯಂಕಂಡು ನಮಿಸಿ
ಮತ್ತನುಜಂಗೆ। ಕರುಣದಿಂ ಪೆಸರಿಟ್ಟುಜಗದೊಳಾರಿಂದಲುಂ। ಮರ
ಣವಾಗದೊಳ್ ವರವೀವುದೆಂದಜನಕ್ಕೈಗಬ್ಧಿಸುತನಂಕೊಟ್ಟನು॥ ೭॥
ಸರಸಿಜಭವಂಶರಧಿಜಾತನಂತೊಡೆಯುಮೇ। ಲಿರಿಸಿಕೊಂಡವನಭ
ದ್ರಾಕಾರಮಂ ನೋಡು। ತಿರವಜನಗಡ್ಡಮಂ ತೂನಲ್ಕೆ ಕಡುನೊಂದು
ಕಂಣನೀರವನವೋಲೆ॥ ಸುರಿಯಲಾಯಾಸದಿಂ ಬಿಡಿಸಿಕೊಂಡೆಂದನೆ
ಲೆ। ಶರಧಿಕೇಳಿವನೆನ್ನ ಕಂಗಳಜಲಂಗಳಂ। ಧರಿಸಿದನಿಮಿತ್ತದಿಂ ವರಜ
ಲಂಧರನಿಪಂ ಸಾಮಾನ್ಯನಲ್ಲೆಂದನು॥೮॥ ಆವನಿಂದೀತಂಗೆ ಜನನವು
ವನಿಂದಲೇ। ಸಾವುಪೊಸಕ್ಕೈದುವಿಂದಲ್ಲದುಳಿದೀಕ್ಷುದ್ರ। ದೇವಾಸು
ರೋರಗನರಾಳಿಯಿಂದಳಿಯಬೇಡೆಂದುವರವಂಪಾಲಿಸಿ॥ ಆವೇಳೆಯೊ
ಳುಶುಕ್ರನಿಂದಸುರರಾಜನೆಂ। ಬೀವಿಮಲನಾಮದಿಂ ಪಟ್ಟಮಂ ರಚಿಸಿ
ರಾ। ಜೀವಪೀಠಂಪೋದನತ್ತಲುಂಬನಬನಕ್ಕೀತನಭಿವರ್ಧಿಸಿದನು॥
ಶುಕ್ರನೀತಂಗೆ ಕಾಂಚನಮಗಳ್ ವೃಂದೆಯಂ। ಶಕ್ರವಿಭವದೆಮದು
ವೆಯಂಮಾಡಿದನ್ನೃಪಾ। ವಿಕ್ರಮಾನ್ವಿತನಾಗಿ ಜಾಳಂಧರಾಖ್ಯಯುದ
ಬಲುರಾಜಧಾನಿಯೊಳಗೆ॥ ವಕ್ರವೈಭವದಿಂಗಿರಿಯೊಳಡಗಿರ್ದ
ಸುರ। ಚಕ್ರಮಂಕರಸಿಕಾಣಿಕೆಗೊಳುತ್ತವೃಂದೆಯೊಡ। ನೀಕ್ರಮ
ದೊಳತಿವಿನೋದಂಗಳಿಂ ಖಳರಾಜನಿರುತಿರ್ದನುತ್ಸವದೊಳು ॥೧೦॥
ಆತಿಸೈಸಿದ್ಧರಾಮೇಶಸುಖಮಿರುತಸುರ। ಪಾಲಕಜಲಂಧರಂ ಲೀಲೆ
ಯಿಂತನ್ನವರ। ಜಾಲಂಧರಾಖ್ಯಪುರದೊಳಗಿರುತ್ತೊಂದುದಿನ ಪ್ರೋಲ
ಗದೊಳೊಪ್ಪುತಿರಲು॥ ಲೀಲೆಯಿಂದಸುರಗುರುಬಲಗಡೆಯೊಳಿರೆಬಂ
ಧುಜಾಲಮಿರೆಪಿಂದೆಸೆಯೊಳಖಿಳರಾಕ್ಷಸಸುಭಟ। ರೋಲಗಕೆಬರುತಿ
ರ್ದರದ್ಭುತಾಕಾರದಿಂಪೇಳ್ವುದೇನಚ್ಚರಿಯನು॥೧೧॥ ಪೊಳೆವಕೆಂಪಿನಾ
ಸೆಗಳ್ತೋರೊಡಲಕೆಂಗಂಣ। ಬಳೆದಭುಜದುಬ್ಬಗಳಸಲೆಮಸುಡ
ಕೊಬ್ಬುಗಳ। ತಳೆದಕೈದುಗಳಜುಂಜುರುದಲೆಯಭರಸಿಡಿಲಜಂಗುಳಿ
ಯುಗರ್ಜನೆಗಳ॥ ಥಳನಳಿಪಕೊರವಾಡೆಗಳಕರ್ಕಶರೋಮ। ವಳೆವ
ಟ್ಟಬಿರುದುಪಾಹೆಗಳಮಣಿಮಕುಟದೊಬ್ಬುಳಿಯ। ಬೆಳಗಿನಬಿರುಸು
ನಡೆಯರಾಕ್ಷಸಸುಭಟರೋಲಗಕೆಬರುತಿರ್ದರು॥೧೨॥ ಶ್ವೇತದಂತಂ

ಸುಪಾರ್ಶ್ವನುಂಪ್ರಜಂಘನುಮ್ಮಯಂ । ನೀತಿವಂತಂವಿಪ್ರಜಿತುವಿರೂಪಾ
ಕ್ಷಂವು। ಹಾತಿಬಲವಿದ್ರಾವಣಮ್ಮಹಾನಾಭಂಪ್ರಲೋಮುಮ್ಮರೀಚಿ
ಮುದಿರಂ॥ ಕೇತುವುಂಜರ್ಝರಂವಾಮುಸಂಗಜಶಿರಂ। ಕೇತುವೀರ್ಯ್ಯಂ
ನವುಬಿವುಂತಾದಖಳನೃಪ। ವ್ರಾತವೈತರುತಿದುರ್ದಾಜಲಂಧರ
ನೋಲಕ್ಕೆಬಹುಭೀಕರದೊಳು ॥೧೩॥ ಅರಿಬಲಪ್ರಳಯಪ್ರಚಂಡ
ನುಂಚಂಡನುಂ। ಧುರವಿಜಯಘನತಟತ್ಕೇತುವುಂಕೇತುವುಂ। ಪರ
ಮವಿಕ್ರಮನಾಗಿಶುಂಭನುಂಶುಂಭನುಂಮಧುಮತ್ತಧೂಮ್ರಾಕ್ಷರು
ಗುರುಭೀಷಣಾಂಗಪ್ರಹೇತಿಯುಂಹೇತಿಯುಂ । ಸುರಬಲಾಹಕದೀ
ರ್ಘಬಾಹುವುಂಬಾಹುವುಂ। ದುರುಳದಾನವಖಡ್ಗರೋಮನುಂಭೀಮ
ನುಂಖಳನೋಲಗಕೆಬಂದರು॥೧೪॥ ಕಾಲನಮಹಾಕಾಲದಂಡವುಂಸೆ
ಳೆವಲಯ। ಕಾಲಭೈರವನದಾಡೆಯನುಗಿವಕೋಪದಿಂ। ಕಾಲಮೃ
ತ್ಯುವಿನಗಂಟಲನರಿವಗಿರಿಗಳಂಕೀಳ್ತಿರಿಕಲ್ಲಾಡುವ॥ ಕಾಲಮೇ
ಘದಸಿಡಿಲತೊಡಿಗೆಯುಸಲೆತೊಡುವ। ಕಾಲದೋಳ್ಪ್ರಳಯಂಗಳಂ
ಮಾಳ್ಪಭೀಕರದ। ಕಾಲರಕ್ಕಸರೈದಿಸಂದಣಿಸಿನಿಂದಿರ್ದರೇನೆಂಬೆ
ನಚ್ಚರಿಯನು ॥೧೫॥ ಇಂತುಖಳರಾಜನೊಡ್ಡೋಲಗದೊಳಿಪ್ಪಸಮ।
ನಂತರದೊಳೆತ್ತುಳಭಯಭಕ್ತಿಯಿಂದಾಕ್ಷಣಂ। ಮುಂತಿಪ್ಪರಾಹುಕೇ
ತುಗಳನೀಕ್ಷಿಸಿಮಹಾವಿಸ್ಮಯಸ್ವಾಂತನಾಗಿ॥ ಇಂತಿದೇನೊಂದುತ
ನುವೆಂಡಾದಕಾರಣಮಿ। ದಂತಿಳಿಯ ಪೇಳೆಂದುಶುಕ್ರನಂಬೆಸಗೊಳು
ತ। ದಂತರುಚಿಭಿತ್ತಿಯನಲಂಕರಿಸೆಪೇಳ್ದನವದಿರಪೂರ್ವಸಂಗತಿಯ
ನು॥೧೬॥ ಕೇಳಾದೊಡೆಲೆಜಲಂಧರಪಿಂತೆದಿವಿಜಕುಲ। ಪಾಲಕಂಸಕ
ಲದೇವಾಸುರರ್ವೆರಸಿಘನ। ಶೀಲೆಯುಂಶರಧಿಯಂಮಥಿಸಿಸುರತರುದಿವಿ
ಜಮಣಿದಿವಿಜಧೇನುವೆಂಬ॥ ಮೇಲಾದವಸ್ತುಗಳ್ವೆರಸಿಸುಧೆಯುದಿಸೆ
ಲ। ಕ್ಷ್ಮೀಲೋಲನಾಸುಧೆಯನಮರಾಸುರವ್ರಜಕೆ। ಪಾಳಿಕದೊಳೆ
ರೆಯೆಶಶಿರವಿಯಕೊಂಡೆಯದೆತಳೆಯುರಿಯುಲಿಂತಾಯ್ತೆಂದನು॥೧೭॥
ಕೇಳಿಘುಡಿಘುಡಿಸಿಕೋಪಾಗ್ನಿಸ್ಫುಲಿಂಗಪ್ರ। ಲೋಲಭೀಷಣನಯನ
ಸಂಮಿಳಿತಗುರುತರಗ। ರಾಳಮುಖನಾಗಿನುಡಿದಂತಮ್ಮತಂದೆಯುಂ
ಮಥಿಸಿನಾನಾವಸ್ತುವಂ ॥ ಖೂಳನೊಯ್ದನೆತನ್ನಬಸುರನುಗಿದಾಂ
ಕರುಳ। ಜಾಳವುಂರಣಭೂತಕುಣಿಸುವೆಂಬಲವೈದ । ಹೇಳೆನುತಗ
ರ್ಜಿಸುತಿರ್ಪಖಿಳರಾಜನೊಡನಸುರಗುರುವಿಂತೆಂದನು॥ ಸಾಮವುಂ
ಭೇದವುಂದಾನವುಂದಂಡವುಂಭೂಮಿಪತಿಗಳನೀತಿಕೇಳ್ಚರರನ
ಟ್ಟಿಸು। ತ್ರಾಮನಂವಸ್ತುವಂಬೇಡಿಸುವದೀಯದೊಡೆದಂಡದಿಂಕೊಂ

ಬುದೆನಲು॥ ಆಮಾತ ಕೇಳಿ ಚರನೊರ್ವನಂ ಕರೆದು ನೀ। ತಾಮಸವ
ಮಾಡದಿಂದ್ರನ ಬಳಿಗೆ ಪೋಗಿಯೆಂ। ಮಾಮಹಾವಸ್ತುವಂ ಕೊಟ್ಟೆಮ್ಮ
ಕಂಡು ಬದುಕೆಂದು ಸುರು ಪೋಗೆಂದನು॥ ೧೯॥ ಚರನಸುರರಾಜನಂ ಬೀ
ಳ್ಕೊಂಡು ಬೇಗದಿಂ। ಸುರಪುರಕೆ ನಡೆತಂದು ಬಾಗಿಲೊಳು ತಡೆದರಂ।
ಸರಕುಮಾಡದೆ ಪೊಕ್ಕು ಸುರಪನಾಸ್ಥಾನಕ್ಕೆ ಬಂದಲವನ ದಿಟ್ಟತನವ॥
ಸುರಮಂತ್ರಿ ಕಂಡು ನೀನಾರ ದೂತಂ ನಮ್ಮ। ಪುರಕೆ ದೇಂ ಕಾರಣಂ ಬಂ
ದೆ ಕಳುಹಿದರಾರು। ನಿರುತದಿಂ ಪೇಳೆಂದು ಬೆಸಗೊಳೆ ಲಕ್ಕಗಳಾಖಿಳನ
ಚರನಿಂತೆಂದೆನು॥ ೨೦॥ ಸಕಲಸುರವಾರ್ಧಿವಡಬಂ ದಿವಿಜಕುಲಶರಭ॥
ನಿಕರಭೇರುಂಡನಸುರೇಂದ್ರಮಸ್ತಕದ ಪಾ। ಣಿಕ ಜಲಂಧರನ ದೂತಂ
ಪಿಂತೆಯೆಮ್ಮಾಳ್ದನಯ್ಯನಂ ಬಿಡದೆ ಮಥಿಸಿ ॥ ಪ್ರಕಟತರವಸ್ತುಗಳ
ನೊಯ್ದಿರಿಗಡಸುರನಾ। ಯಕನವಂ ಬೇಡಲಟ್ಟಿದನೆನ್ನನೀವುದೇ।
ಯುಕುತಿಯಲ್ಲದೊಡೆ ರಣಸನ್ನಾಹವಾಗಿಯೆನೆ ದಿವಿಜಗುರುವಿಂತೆಂ
ದನು ॥೨೧॥ ದೂರ್ವಾಸಮುನಿವರಂ ಕೊಟ್ಟ ಶಾಪದೊಳೀಸು। ಪರ್ವ
ರಾಜನವಸ್ತುಗಳು ಶರಧಿಯೊಳು ಕೂಡೆ। ಶರ್ವನಾಜ್ಞೆಯೊಳದಂ ಮ
ಥಿಸಿ ತದ್ವಸ್ತುವಂ ತಂದೆ ವಾಂ ಪೆರರೊಡವೆಯಂ॥ ಪಾರ್ವನೇ ಸುರರಾಜ
ನೆನೆಕೇಳ್ದು ಕಲಹವಂ। ನಿರ್ವಹಿಸಲಾಪಿರೇ ಮದ್ವಸ್ತುವಂ ಕೊಟ್ಟು।
ಸರ್ವಥಾ ಕಂಡು ಬದುಕುವುದೆಂದು ಸಾರಿಬಂದೊಡೆಯನೊಡನಿಂತೆಂ
ದನು ॥೨೨॥ ಜೀಯ ನೀನೆಂದಂತೆ ಯಾಂ ಪೋಗಿ ನಿರ್ಜರರ। ರಾಯ
ನಂ ವಸ್ತುವಂ ಬೇಡಲಿಂದೆನಗೆ ಪ। ರ್ಯಾಯಮಂ ನುಡಿದನಲ್ಲದೆ ಕೊಟ್ಟು
ಕೊಂಬಮಾತಿನಿತಿಲ್ಲವೆಂದೆನಲ್ಕೆ ॥ ಆಯುದೋಳ್ಭುಗುಭುಗಿಸಿ
ಕೋಪಾಗ್ನಿ ಪರ್ಬಿಪುದು। ರಾಯ ಮಾಗಲ್ಕವಂ ಕರೆಕರೆಸಮಸ್ತ ಖಳ।
ನಾಯಕರನೀಗ ಪ್ರಸ್ಥಾನಭೇರಿಯ ಪೊಯ್ವುದೆಂದವಂ ನೇಮಿಸಿದನು ॥
ಸಂಧಿಮುರಿದುದು ತೊಲಗಿ ತೊಲಗಿ ದಿವಿಜವೈರಿ। ಗಂಧೇಭಹರ್ಯಕ್ಷ
ನೈತಹಂಸಪರರಾಜ। ಸಿಂಧುವಾಡಬನಿದಕೊ ಬಂದ ನಾಶಾಧಿಪರ್ಬಿಟ್ಟೋ
ಡಿ ಕಂಡ ಕಡೆಗೆ॥ ಕಂಧರವನುಳುಹಿಕೊಳ್ಳೆನುತ ಸಾರುವ ತೆರದಿ। ದಂ
ಧಳಂಧಳಧಳದಳೆಂಬ ಭೀಷಣಬಂಜ। ಲಂಧರ ಪ್ರಸ್ಥಾನಭೂರಿಭೇರೀ
ರವಂ ಪೊಣ್ಮಿತು ಜಗತ್ರಯದೊಳು ॥೨೪॥ ವಾಜಿಗಳನಿರದೆ ಹಲ್ಲಣಿಸಿದ
ಮರ್ತ್ತಗಜ। ರಾಜಿಗಂ ರಂಚಿಕೆಯನಿಕ್ಕಿ ದರು ತೇರ್ಗಳುಮ। ನೋಜೆ
ಯಿಂ ಪಣ್ಣಿದರ್ ದೋಡು ಸೀಸಕವಿಕ್ಕಿ ಕಾಲಾಳ್ಗಳನುವಾದರು ॥ ರಾಜಿ
ಸುವ ಬಹುವಿಧದ ವಾದ್ಯಂಗಳಾರ್ಭಟೆಗೆ। ಮೂಜಗಂ ತಲ್ಲಣಿಸಿತಾ ಕ್ಷಣ
ದೊಳೆ ಸುರಕುಲ। ರಾಜನತಿಸಂಭ್ರಮದೆ ತನ್ನ ಗುರುವಿತ್ತ ಸುಮುಹೂ

ರ್ತ್ರದೊಳು ಪೊರಮಟ್ಟನು ॥೧೫॥ ಭಟರಹೂಂಕೃತಿಗಜದಬೃಂಹಿತಂ
ವಾಜಿಗಳ| ಪಟುಹೇಷಿತಂ ತೇರಚೀತ್ಕೃತಂ ವೀರಕರ| ಘಟಿತಶಸ್ತ್ರದ
ಖಣಖಟಲ್ದನಿ ಮದೇಭಘಂಟಾರವಂ ತುರಗಚಯದ॥ ತುಟಿಯನುಣ್ಣ್ರ
ವಕಡಿಯುಣದಖಣಖಣಧ್ವಾನ| ಮಟನದರಘಾಶ್ವಖುರಪುಟಘುರು
ಘುರುಸ್ವನಂ | ಪಟಹತಂಬಟಢಕ್ಕೆಗಳರವಂ ಬ್ರಹ್ಮಾಂಡಘಟವನ
ಲ್ಲಾಡಿಸಿದುದು॥೧೬॥ ರಾಮ ಕೇಳ್ಕೈದು ಪದ್ಮಂ ವರೂಥಂ ಸಮದ| ಸಾ
ಮಜಂ ನೂರು ಪದ್ಮಂ ವಾಯುವೇಗವಿ| ಸ್ಪೀಮವಾಜಿಗಳುಂ ಸಹಸ್ರಪ
ದ್ಮಂ ಶತಸಹಸ್ರಪದ್ಮಂ ಸುಭಟರು॥ ಈ ಮಹಾಗ್ರಣಿ ನೆಯೊರ್ವನ ಸೇನೆ
ಯಿಂತಪ್ಪ| ಭೀಮರೂಪಿನ ದೈತ್ಯನಾಯಕರು ಸಂಗರೋ| ದ್ದಾಮರೇ
ಶತಕೋಟಿಪದ್ಮಂಗಳೊಡನೆಕ್ಕಸರಾಯ್ನೈತಂದನು॥೧೭॥ ಒಡೆ
ನೆನಡೆದುದು ಜಲಂಧರನ ತೂಳದ ದೈತ್ಯ| ರೆಡಬಲದ ಕರಿತುರಗರಥಪ
ದಾತಿಗಳವಂ | ಗಡದೊಳಾರ್ಭಟಿಪ ವಂದಿಗಳ ಕಳಕಳದ ಬಗೆಬಗೆಯ
ವಾದ್ಯಧ್ವನಿಗಳ॥ ಗಡಬಡೆಯೊಳಖಿಳಬ್ರಹ್ಮಾಂಡಂಗಳೊಳಿಯಿಂ|
ಡೊಡೆಯುದಿರದೆನೆ ಭೂಮಿಯುಂ ಪೊತ್ತಗಜರಾಜಿ| ಯುಡುಗದಿರದೆನೆ
ಫಣಿಪನಡುಗದಿರನೆನೆ ಕೂರ್ಮನೊಡೆಯದಿರದೆನೆ ಭರದೊಳು ॥೧೮॥
ಎತ್ತಲುಂ ಪುದಿಗರುಣರಜಮಯಂ ಗಜಮಯಂ| ಸುತ್ತಲುಂ ದೈತ್ಯಪ್ರ
ಚಯಮಯಂ ಹಯಮಯಂ | ಮುತ್ತಿರ್ದ ಛತ್ರಚಾಮರಮಯಂ
ಸ್ವರಮಯಂ ನೆಗಳೊನಾನಾ ವಾದ್ಯದ॥ ಬಿತ್ತರದೊಳಿಹ ರಥಪ್ರಜಮ
ಯಂ ಧ್ವಜಮಯಂ| ಸೂತ್ರಕತ್ತಿಗಳ ಬೀಧಿಮಯಂ ಬಿತಿಮಯಮುಂ|
ಮುತ್ತಿ ಬಹಸಕಲಪರಿಕರಮಯಂ ಶರಮಯಂ ದೈತ್ಯರಮಹಾಬಲ
ದೊಳು ॥೧೯॥ ಬತ್ತಿದುದು ಸಾಗರಪಾತ್ರತಮ ಹಿಪಸಕೂರ | ಲೊತ್ತಿ
ದುದು ಕೂರ್ಮನಖಪರ್ಪರವಿರದೆ ಜೇಗನು | ಗೊತ್ತಿದುದು ಜಡಿವ
ನಾನಾವಾದ್ಯನಿಸ್ವನಂ ಬ್ರಹ್ಮಾಂಡದೆಲ್ಲೆಡೆಯೊಳು ॥ ಸುತ್ತಿದುದು
ವೈರಿಭೂಪಾಲರಂ ಭೀತಿಜಂ | ಬತ್ತಿದುದು ನಾಕಿಗರ ಗಡಿಯ ಠಾಣೆ
ಯುವಹಾಣ | ದೆತ್ತಿದುದು ಸುರಪುರಕೆ ಕಟೆ ಜಲಂಧರನ ಸೇನಾಸಮೂ
ಹಂ ನಡೆಯಲು॥ ೨೦॥ ಕಂಡವರನುಚಿತಬಿಂಮಾನ್ನಿಸುತ ಸಲೆ ಭಯಂ|
ಗೊಂಡ ಗರ್ನಂ ಬುಗೆಯನೀವುತ್ತ ಮಲೆತರಂ | ಬಿಂಡಗರಿವುತ್ತ ಮಿಬಿ
ರಾದ ದುರ್ಗಂಗಳಂ ಧೂಳಿಗೋಟೆಗಳ ಕೊಂಡು ॥ ಪೆಂಡಿರಂ ವಸ್ತುಗಳ
ತಂಡಂಗಳಂ ಸೂರೆ | ಗೊಂಡು ತದ್ಭೂಪರಂ ದಂಡಿಸಿಯೆ ಪಿಡಿದು ಪ್ರ|
ಚಂಡಖಳನಾಯಕನ ದಂಡು ನಡೆದುದು ಸುರರ ನಂಡಲೆವ ತವಕದಿಂ
ದಂ॥ ೨೧॥ ದಾಳಿಯುಟ್ಟಿದುದು ದಿಕ್ಕುದಿಕ್ಕಿಗಂ ದಸುರಬಲ| ಜಾಲಮ್ನುಗವ

ನಸ್ಥಲದುರ್ಗಂಗಳಂ ಬಿಡದೆ। ಕೋಳುಕೊಂಡನಾರ್ಗಡೆಸೆರೆ ತುರುಗ
ಳಂ ಕೊಟ್ಟು ಬಹುಭಯಂಗೊಂಡು ಕೂಡೆ॥ ಗೂಳಿಯಂ ಬಂದುದಮರಾ
ವತಿಗೆ ತಾನದಂ। ಕೇಳಿ ಬಳೆರಾಜನ್ಯೆ ತಪ್ಪುದಂ ಚಿತ್ತದೊ। ಳ್ತಾಳಿ ಘ
ನರೋಷವ್ಯಂ ಕಂಗಳೊಳ್ಕಿಡಿಗೆದರಿ ಸುರಪಾಲನಾಕ್ಷಣದೊಳು॥೨೨॥
ಕರಿಸಿದಂ ಸಕಲದಿಕ್ಪಾಲಕಿನ್ನರಯಕ್ಷ। ಗರುಡಗಂಧರ್ವಸಾಧ್ಯೋ
ರಗಪಿಶಾಚಕಿಂ। ಪುರುಷರಾಜಸಸಿದ್ಧಗುಹ್ಯಕಾಪ್ಸರರೆಂಬ ಸಕಲ
ಲೋಕಾಧಿಪರನು॥ ಕರಿತುರಗರಥಪದಾತಿಗಳ ಸಂದಣಿಯಿಂದೆ। ಸುರ
ಪುರಕೆ ಬರಲಿಂದ್ರನಾಗಲಾ ಕಲಿಜಲಂ। ಧರನ ಕೂಡಣಿಕಲಹಕೇಳಿಯೆ
ನಲಾಕ್ಷಣಂ ಸಂಭ್ರಮಂಬಿಪ್ಪೊರವುಟ್ಟಿದು ॥೨೩॥ ಆನೆಗಳಿಗಿಕ್ಕರಂ
ಚಿಕೆಗಳಂ ತುರಗಸ್ರ। ತಾನವಂ ಹಲ್ಲಣಸುತೇರ್ಗಳಂ ಪೂಡುತಾ। ತಾ
ನೀಡುಜೋಡುಸೀಸಕಬಾಹುರಕ್ಕೆ ಚಲ್ಲಣಗಳಂ ಬೇಗದಿಂದಂ॥ ನೀ
ನ್ಯದುತಾನ್ಯದು ಪರಶುಗದೆಮುಸಲಂಸ। ಘೇನುಗಳನೀ ಪುರದ ಬಾ
ಹಿಗೆ ಜಲಂಧರನ। ಸೇನೆ ಬಂದುದು ತಡೆಯದೇಳೆಂಬಗಜಬಜಂತುಂ
ಬಿತಮರಾವತಿಯೊಳು॥೨೪॥ ಅಸಮಾನವನಸೇನಾಸಮುದ್ರಂತ
ನ್ನ। ಮುಸುಕಲ್ಕೆ ತರೆಕಂಡು ಪುರವನಿತೆ ಸೇನೆಯಂ। ಬೆಸಲಾದಳೊ
ಪೇಳೆನಲ್ಕೆ ತಂಬಟಭೇರಿಡಕ್ಕೆಗಳರಭಸದಿಂದಂ॥ ಅಸಿಪರಶುತೋ
ಮರಕಠಾರಮುದ್ಗರಕುಂತ। ಮುಸಲಸೆಲ್ಲೆಹಪಿಂಡಿವಾಳಂಗಳಂ ತಳೆ
ದು। ಮಸಕದಿಂದೈದಿದ್ವುಟುಭಟರ್ಪುರಮನಗಣಿತಕೋಟಿಸಂಖ್ಯೆ
ಯಿಂದಂ॥೨೫॥ ಭೂರಿಭೇರಿಗಳರಭಸದವಂಬಜನದಗಂ। ಭೀರಘೋಷ
ದಬಳಿಸಿಜೇಯೆಂಬಮನುಮನಿಗ। ಳೋರಣದಕ್ಕೈಗೊಡುವ ದಿಕ್ಪಾ
ಲಕರಪರಕೆಗುಡುವ ಮಂತ್ರಧ್ವನದ॥ ಚಾರುಚಾಮರಛತ್ರನಿಚಯ
ದಾಡಂಬರದ। ಸಾರವೈಭವದ ಸಂಭ್ರಮದಿಂದೆದಿಪಜಮುದ। ವಾರ
ಣವನೇರಿ ನಡೆದಂ ರಣಕೆ ದೇವೇಂದ್ರನತುಳಸುಮ್ಮಾನದಿಂದಂ॥೨೬॥
ಜಾತವೇದಂ ತಗರನಂತಕಂ ಕೋಣನಂ। ಯಾತುಧಾನಂ ಮನುಜನಂ
ಪಾಶಿಮಕರವಂ। ವಾತನೇಣವನೀಶಿ ಸಬಿನಶ್ವರತ್ನ ಮುಮನೀಶಾ
ನನುಂ ವೃಷಭನಂ॥ ಪ್ರೀತಿಯಿಂದೇರೆ ಸುರನರಗರುಡಗಂಧರ್ವ। ಜಾತ
ಮುಂ ಸದವಾಹನವನೇರಿ ಮುಂದೆಸಂ। ನಿಪ್ಪ್ಯತಬಲವೆರಸಿ ದೇವೇಂ
ದ್ರನಿಕ್ಕಲದೊಳಗೆ ನಡೆಗೊಂಡು ದೇವೇಳ್ವೊನು॥೨೭॥ ಬಿಗಿದರಂ ಚಿಕೆ
ಯ ಘಂಟಾರವದ ಘನಪತಂ। ಕೆಗಳ ಚಂಚತ್ಕರದಗಜರಾಜಿ ಹಲ್ಲಣದ।
ಮೊಗರಂಬಗಳ ಪಕ್ಕರಕ್ಕೆಗಳ ಕಡಿಯಣದ ವಾಜಿಗಳ ವಜ್ರಾಂಗಿಯ ॥
ಮಿಗೆಬಾಹುರಕ್ಕೆಗಳಸೀಸಕದಕೈಯಕೈದುಗಳ ಕಾಲಾಳ್ಗಳುಂ ಬುದುಂ

ಬಿಸಾರಧಾರೆ ಚಿ। ರಿಗೆಬರ್ಪಚಿನ್ನದವರರೂಪಂಗಳ್ವಿದಿದನ್ನುಸುರಸೈ
ನ್ಯದೆಣ್ಣೆಡೆಯೊಳು ॥ ೨೮॥ ಬಂದು ದಿವಿಜೇಶ್ವರಂಸಕಲಸುರನಾಯಕ
ರ, ಸಂದಣಿಯಸಂರಂಭದಿಂದ,ಲಮರಾವತಿಯ। ಮುಂದಣವಿಶಾಲವಾ
ಗಿರ್ದಬಯಲೊಳು ಚಾಳಸನ್ನಾಹವಾಗಿನಿಂದು॥ ಹಿಂದೆಮುಂದೆಡೆಬ
ಲದೊಳೆಲ್ಲಿಯುಂನೆರದಬಲ । ಬೃಂದಮಂನೋಡಿವಿಸ್ಮಿತನಾಗಿಇದ
ರೊಡನೆ।ನಿಂದು ಕಾದುವವೀರನಾವನೆನುತೊಡ್ಡಿಗಂಪ್ರಜನತಿವಿಸ್ತ
ರದೊಳು ॥೨೯॥ ಇಂತೆಸವಚನ್ನಬಸವೇಶ್ವರಪುರಾಣಮಂ। ಸಂತ
ಸಬರಗವರ್ಗೊರ್ಪಿದರ್ಗರ್ಥವಾ।ದ್ಯಂತಮಂಬಿಡದೆಪೇಳ್ದಗೆಪ
ಠಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ॥ಸಂತತಂಸಕಲಸುಖಮಂಸಕಲ
ಭೋಗಮುನ। ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ । ಕಂತು
ಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ ॥೩೦॥

ಎರಡನೆಯ ಕಾಂಡದಲ್ಲಿ ೧೨ನೇಸಂಧಿ ಮುಗಿಯಿತು

## ೧೩ನೇಸಂಧಿ

ಸೂಚನೆ॥ ಸ್ವರ್ಗದರಸಿನಕೂಡೆಕಾದಿಖಳರಾಜನಾ।ದುರ್ಗ
ಮಂಸೆಳೆದುಕೊಂಡಾಕ್ಷಣಂದಿಕ್ಪಾಲ । ವರ್ಗಮಂಬೆಂಬತ್ತ
ಲೋಡಿವಿಧಸಹಿತನ್ವೈಕುಂಠಮಂಪೊಕ್ಕರುಗ॥

ಪದ॥ ಎರಗಿದವಿರೋಧಿಖಳರೆರೆಯದಂಸಮರದೋ।ಳ್ತರಿದುಸುರ
ರಾಲಯದೊಳುರೆಮೆರಾಲಕ್ಷ್ಮಿಯಂ।ಸೆರೆಗೈದುಭಕ್ತರ್ಗೆನೆರತೆಯಿಪ್ಪ
ಕರುಣನಂಕರೆದುಕರೆದುಮ್ಮಾಣದ ॥ ಹರಿದಲೆಯಕೈಯಬೊಬ್ಬಿರಿ
ವರುಂಡಚಕೋರಳೆ। ಪೆರೆಯಸೂಡಿದವ್ಯೈಯವಿರುಪಮುರಿವಾವುಗ
ಳ । ತುರುಗಪಿಂದೊಪ್ಪುತಿಹಕರೆಗೊಂಲಪಂಪಾವಿರೂಪಾಕ್ಷಸಲಹೆಂ
ಮನು॥೧॥ ವಿವರಿಸುವೆನಾಪಿಸಿನ್ನೆಲೆರಾಮುಬಳಿಕಲಾ।ದಿವಿಜೇಂದ್ರನ
ತುಳಿಸನ್ನಾಹದಿಂಬರುತಿರಲು । ತವಕಾಣಸಿತುಜಲಂಧರನಸೈಸಿಕ
ವತ್ತಲದ್ದುತಾಕಾರವಾಗಿ॥ ಜವನಜಂಗುಳಿಯಂತೆಮಿತ್ತುವಿನಪಡೆ
ಯಂತೆ।ಭುವನಕಣ್ಣುರಿಯಂತೆಭೈರವನಬಲದಂತೆ। ತವಕಿಸುವಸಿಡಿ
ಲವಂಗಡದಂತೆಬರುತಿರ್ದುದೇನೆಂಬೆನಕ್ಕಟಯೆನು ॥೨॥ ಭೋರ್ಗರೆ
ದವೀರ್ಬಲದವಾಗ್ಯಂಗಳುಭಯಸುಭ।ಟರ್ಗಳಾರ್ಭಟಸಿತೋಳೊ
ಯ್ದುಪಟುಭಟವಾಜಿ।ವರ್ಗಮುಂರಾವ್ತರಡ್ಡಾಡಿದರ್ತೋಡಿದಬಿಲ್ಲ
ಮಸ್ಪಂಜಿನಿಯನು ॥ ತೇರ್ಗಳಗ್ರದಪಟಂಕೈವೀಸಿಕಾಳಗದ । ವರ್ಗ
ಳಂಕರೆವಂತೆಚರಿಸಿದವುತತ್ಕ್ಷಣಂ । ಸ್ವರ್ಗದರಸಿನಜಲಂಧರನಸೇಸಗ
ಳೊಂದನೊಂದುಸಂಧಿಸುವಾಗಳು॥೩॥ಗಗನಚುಂಬಿತಸಧ್ವಜಾಳಿಗಳ,

ಕುದುರೆತೇರ್ಗೆತೇರು|| ಗರ್ಬದಿಂ ಸುಭಟರ್ಗೆ ಸುಭಟರ್ಗಳಿದಿರಾಗಿ|
ಯೊರ್ಬರ್ಗೊಬ್ಬರ್ನೆಣಸೆ ಸುರಸುಭಟರಿರಿತಕ್ಕೆ| ಮಾರ್ಬಲದ ಚೂ
ಣವುರಿದೋಡಿ ಕೂಡಿತು ಜಲಂಧರದೈತ್ಯನಿಹಸೆಲೆಯನು||೧೦|| ಪಿಂ
ತಿರಿಗಿ ಕಾದಿದರನಿರಿವ ತಂ ತರಿವ ತಂ| ದಂತಿತುರಗಂಗಳಂ ಪಿಡಿವ ತಂ ಜ
ಡಿವ ತಂ| ಮುಂತಳೆರೊ ಭಟರನೆರೆಯಟ್ಟುತಂ ಕುಟ್ಟುತಂ ಮೆಟ್ಟುತಂ
ಪೇರ್ಬ್ವಣವನು|| ಅಂತರಿಸದುರುಬಿ ತಲೆವೊಯ್ಯುತಂ ಬಯ್ಯುತಂ| ತಂ
ತಮ್ಮ ವೀರವುಂ ಮೆರವ ತಂ ಬೆರವ ತಂ| ಭ್ರಾಂತಿಬಿಡಿಸಿದರಾಗರಾಗ
ದಿಂ ಬೇಗದಿಂ ಸುರಭಟರ್ಪರಭಟರನು ||೧೧|| ಖಂಡಮುಯುವೆತ್ತಲುಂ
ಮುರಿಮುರಿದು ಬಿದ್ದಕೋ| ಗಂಡಮುಯುವೆತ್ತಲುಂ ಕುಣಿಕುಣಿವ ಮು
ರುಳಬಲು| ತಂಡಮುಯುವೆತ್ತಲುಂ ಸುತ್ತಲುಂ ಪರಿವ ರಕ್ತಾಂಬುವಿನೊ
ಳೋಲಾಡುತ|| ರುಂಡಮುಯುವೆತ್ತಲುಂ ಕಡಿಕಡಿದು ಕೆಡೆದವೇ | ತಂ
ಡಮುಯುವೆತ್ತಲುಂ ತುಂಡಾದ ಘನಗದಾ| ದಂಡಮುಯುವೆತ್ತಲುಂ ತಾ
ನೆನಿಸಿ ರಣರಂಗಮಿದುರ್ದತಿಭೀಕರಗೊಳು||೧೨|| ರಕ್ತಪ್ರವಾಹವಮಾ
ದುದು ರಣಂ ಸಾಹಸವಿ| ರಕ್ತರಾಗರ್ಬಳೆನ ಚೂಣಿಗರ್ಸ್ವರಕರವಿ ಮು
ಕ್ತಬಾಣೋರಗನ ಬಾಯ್ಗೆ ತುತ್ತಾಗವರಿಭಟರ ಜೀವಾನಿಲಚಯಂ| ಶ
ಕ್ತಿಯುಡಿದವು ಖಳರ ಕಾಯದೊಳು ಬಸುಕೋಪ| ರಕ್ತೇಕ್ಷಣಂ ಶುಂ
ಭದಾನವಂ ಕಂಡು ಕರ| ಯುಕ್ತ ಭೀಷಣಮಾದ ಖಂಡೆಯದು ನುರಿಪಡಿ
ದು ಕೈವೀಸಿದಂ ಬಲವನು||೧೩|| ನಡೆ ಜಂಭನೊಂಕೆಲೆ ನಿಶುಂಭನುಂ ಬ
ಖರಿಚಂಡ| ತುಡುಕು ನೀಸೆಲೆ ಖಡ್ಗರೋಮ ತೋರಿಸು ನಿಂನ| ಕಡು
ಪನೆಲೆ ವಾಮನ ವಿರೂಪಾಕ್ಷ ಕೈದೋರ್ಪುಲೋಮ ಬಲ್ಪೇನಾದುದು
ಮಿಡುಕದಿಹರೇ ದೀರ್ಘಬಾಹು ನಿಲ್ಲಿರೆ ಮುದಿರ | ತಡವರೇ ನಿಂ ಕಾ
ಲನೇಮಿ ಸತ್ವವನೆಲ್ಲಿ| ಮುಡಗಿದಿರಿ ಭಟರೆನುತ ಮೊದಲಿಸಿದಂ ಖಳನೆ
ಸೇನಾನಿ ಶುಂಭನಂದು ||೧೪|| ಮೊಳಗಿದವು ಸಕಲವಾದ್ಯಂಗಳಾರ್ಭಟ
ಸಿದ| ಖರ್ಗಳೆರೊತಲ್ಲಡವು ಕಹಳೆ ಮಿಂಚಿದವು ಕತ್ತಿಗ| ಳ್ಸೆಲೆನೊಂಕಿದವು
ಕುದುರೆಗಳ್ಕೆರಿಗಳೊತ್ತಿದವು ಪಟುಭಟಮುರ್ಂಬರಿದರು || ಖಳನಾ
ಯಕರ್ಕಬುಚೆನುತ್ತಾರಿ ಬೊಬ್ಬಿರಿದು | ಮುಳಿದು ನಿಜವಾಹನಂ
ಗಳನುರುಬಿನಡಸಿದ | ಕೊಳ್ಗುಳದ ಭೀಷಣವನೇನೆಂದು ಬಣ್ಣಿ
ಸುವೆನೆಲೆ ರಾಮ ಕೇಳೆಂದನು ||೧೫|| ಖೋಯೆಂದು ಖಳರಪಡೆ ನಡ
ವುದಂ ಕಂಡಿಂದ್ರ | ನೋಯೆಂದು ಬೊಬ್ಬಿರಿದು ಕೆಲಬಲದ ಸಕಲಸು
ರ| ನಾಯಕರನೈದೆ ಕೈವೀಸಿದಂ ಸೂಸಿದಂ ಮೊದಲೆಯ ಮಾತುಗಳ
ನು || ಬಾಯಬೊಬ್ಬೆಗಳ ತೋಳ್ವೊಯ್ಲ ಪಟುಭಟರ ಸಮು| ದಾ

ಯುದೊಡನಗ್ನಿಯಮನೈರುತ್ಯಜಲಧಿಪತಿ। ವಾಯುಧನದಾದಿಗಳು
ನೂಂಕಿದರುಭರವಸದೊಳೇನೆಂಬೆನಚ್ಚರಿಯನು ||೧೬|| ಸುರಪನಂ
ಶುಂಭನಗ್ನಿಯನಿಶುಂಭಂ ದಂಡಧರನಂ ವಾಮನಂ ನಿರುತಿಯಂ ಮು
ದಿರನುರೆ। ಶರಧಿಪತಿಯಂ ದೀರ್ಘಬಾಹು ಪವಮಾನನಂ ಬುದ್ಧರೋಮಂ
ಧನದನಂ॥ ದುರುಳಪ್ರಚಂಡನೀಶಾನನಂ ಚಂಡನಿಂ। ತಿರದೆ ಮೂದಲಿಸಿ
ಸಮ್ಮುಖವಾಗಿ ತುಳ್ಕಿದ। ಕ್ಷೀರವೆರುಷವುಂ ನಭೋಂಗಣವೆತ್ತ ದೆಸೆ
ಯೆತ್ತ ಸುರಧರಣಿಯೆತ್ತಲೆನಲು ||೧೭|| ಕೊಚ್ಚುವಪ್ರೋಸನುಸೆಯು
ಶರಗಳಿಂದೆಸುಗೆಯಂ। ಸೆಚ್ಚುವರುಗ್ರದಯುಗ್ರಕೋಪವುಂ ಕಣ್ಣ
ಳೋ। ಬ್ಬಿಚ್ಚುವರ್ಕಣೆಕಣೆಗಳೆಸುಗೆಗಳವುಸಕದಿಂ ಬೃಂದಾರಕರನೆ
ಬ್ಬವನು॥ ಮುಚ್ಚುವಬಲದೆಡದೊಳುರುಬುತಿಸುಭಟರಂ। ಪೆಚ್ಚು
ವಭೂತವೇತಾಳಜನಕೀಪರಿಯೊ। ಳೆಚ್ಚಾಡಿದರ್ಪ್ರರೇಂಪ್ರಾದಿಸು
ರನಾಯಕರ್ಬಳಸಾಯಕರ್ಪ್ರರದೊಳು॥೧೮॥ ಅಸಿಗಳಿಂದೊರ್ಮ್ಮೆ ಕುಂ
ತದೊಳೊರ್ಮ್ಮೆ ನೆಗಳೊಪ। ಟ್ಟಸಗಳಿಂದೊರ್ಮ್ಮೆ ಗದೆಗಳೊಳೋರ್ಮ್ಮೆ ಘನತ
ರದ। ಮುಸಲಂಗಳಿಂದೊರ್ಮ್ಮೆ ಮುದ್ಗರದಿನೊರ್ಮ್ಮೆ ಸುರಗಿಯಿಂದೊ
ರ್ಮ್ಮೆಯೊರ್ಮ್ಮೆ॥ ಅಸಮಸಂಗ್ರಾಮದೊಳಗಿಂತುಭಯನಾಯಕ। ರ್ಮ್ಮಸಕ
ಬಂಪೊಯ್ದಾಡಿದಬಿಡದೆ ಪ್ರೇಕ್ಷಕರ। ಕ್ಕಸರಿರಿಯೆತ್ತರಿಸಲಾರದಾ
ಶಾಧಿಪರು ಬೆಂಗೊಟ್ಟರಾಕ್ಷಣದೊಳು ||೧೯|| ಸುರಪನೋಡಿದನಗ್ನಿ
ಸಾಗಿದಂ ಪ್ರೇತಪತಿ। ತೆರಳಿದನು ನೈರುತ್ಯನಡೆದನು ಜಲಧಿಪಂ। ಮು
ರಿದನನಿಲಂ ಸರಿದನಭವಮಿತ್ರಂ ಸೊಂದನೀಶಾನನಳವಳಿದನು॥ ಉರ
ವಣಿಸಿ ದೈತ್ಯನಾಯಕರೋಡುವಮರರಂ। ಬೆನಸಿದರು ಘೋರಗಳೇಬೆ
ನ್ನೀಯೆ ಚತುರಂಗ। ಮಿರದೆ ತೆಗೆದೋಡುತಿರ್ದ್ದುದು ಕಟ್ಟಿ ಬಿಟ್ಟು ಕು
ಟ್ಟುವ ದೈತ್ಯಭಟರುರುಬೆಗೆ ||೨೦|| ಬಿರುಗಾಳಿ ಬೀಸಿದರನೊರಜು
ವಿಂಡದಕಾಂತು। ಮುರಿಯು ಪಸುದೇನಿಮಿಷಮಾತ್ರದೊಳು ಸುರಸೇ
ನೆ। ಸರಿಸಂಚುವಟ್ಟು ತಾಯ್ಗಮ್ಮಕ್ಕಳಾಗದೊಂದೆ ಬಾರಿ ಬೆನ್ನಿತ್ತು
ದು॥ ಇರಿಕಡಿಪೊರಳ್ಚಿ ಸೋಲ್ತುರ್ದ್ದಿ ವಿಜರೆನುತಾರ್ದ್ದು। ಸರಿಗರಕ್ಕಸರಾ
ನೆಕುದುರೆಸಹಿತೊತ್ತಿ ಕುರಿ। ದರಿಮಾಡಿ ಬಿಡದೆ ಬೆಂಬತ್ತಿ ದರ್ಪ್ಪಸಸ
ದೊಳೇನೆಂಬೆನದ್ಭುತವನು॥೨೧॥ ಕಡಿದರೋಡುವಭಟರ ಬೆಂಬತ್ತಿ
ತಮುತಮಗೆ। ಪಿಡಿದರ್ತ್ತುರಂಗಗಜರಾಜಿಯಂ ಪಂಧಮುಂ। ನುಡಿವರಿರ
ದೊತ್ತಿದರ್ಮ್ಮೆತ್ತಿದರ್ಕರ್ತ್ತಿದರ್ಮ್ಮೆತ್ತಿದ ವೈರಿಗಂಬನು॥ ಉಡಿದರಾಂತೆ
ವರಬಗ್ಗರಿಗಳಂ ದಾನವರ್। ಕುಡಿದರರುಣಾಂಬುವಂ ಶಾಕಿನಿಯರೀ
ಸುರರ್। ಮುಡಿದರಂ ದೋಡಿದರೆಕ್ಕಿಡಿದರ್ಪ್ಪಾಡಿದರ್ನ್ನೋಡಿದರ್ಕೈರದುಗ

ಳನು||೨೨||ಶಿರವರಿಯಲೆತ್ತಿದಕರಾಗ್ರಮಂಕಂಡುಪ| ಲ್ಗಿರಿವುತೆಂಖಡ್ಗ
ಧಾರೆಗೆಬೆದರಿತೆಂತಮ್ಮ । ಕರವನೊಡ್ಡುತಕಾಲ್ಗೆಬೀಳುತೆಂಪುಲ್ಗಚ್ಚಿ
ದೈನ್ಯವಚನಂಗಳಿಂದಂ| ಶಿರವನುಳುಹು ನಿನ್ನಯಬಸುರಬಂದೆ
ವೆಮು। ಗೊಗೆವುದಾಳ್ದಸಮಂಮಾಳ್ಪೆವೆಂದುಸುರಿವ್ರೈ|ಗರೆವುತಿರ್ದ
ರ್ಮಡಿದಗಜಹಯಂಗಳ್ಗಳವುರೆಯೊಳಳವಳಿದುದಿವಿಜಭಟರು||೨೩|| ಮೊ
ರೆವಬೊಬ್ಬೆಗೆರಾವ್ತರುಂಬಿಸುಟಮಾಜಿಗ । ಳ್ಪರಿದಾಡಿದವುಮಾವ್ತ
ರಂಕೆಡಪಿಯಾನೆಗ| ಳ್ತಿರುಗುತಿರ್ದವುಬಂದುಬಿದ್ದರಮರಾವತಿಯಪೇ
ರಗಳನಮರಭಟರು || ಪುರದಪೇರ್ಬಾಗಿಲೊಳ್ಕರಿತುರಗಪದಹತಿ
ಯೊ|ಳರೆವುತಿರ್ದುದುಸುರಪದಾತಿಬಳಚತುರಂಗ । ಮುರವಣಿಸಿ
ತುಳಿದಿರಿದುಕೊಂದುಬರುತಿರ್ದುದದನೇನೆಂಬೆನದ್ಭುತವನು||೨೪||
ಬಾಗಿಲೊಳ್ಪೊಗುವಡಸದಳಮಾಗಿಪುರಣಮಂ। ನೀಗಿದರ್ಕೆಲಬರಿ
ರಿದಾಡಿನೋಡುವೆವೆಂದು । ತಾಗಿದರ್ಕೆಲಬರಾನಗರದಾಳ್ವೇರಿಯೊ
ಳುನೋಡುತಿಹಬಾಲೆಯರನು || ಬೇಗನೆಮ್ಮಂಸೇಟಕೊಳಿರೆಂದವ
ಗೆರ್ತಲೆ| ವಾಗಿದರ್ಕೆಲರರಿಗಳುರುಬಿಬರೆಕಂಡುಪೇ| ರ್ಬಾಗಿಲ್ಗಳಂಬೇ
ಗಮುದ್ರಿಸಿದರಾಸಮಯದೊಳುಸುರಪತಿಯಸುಭಟರು||೨೫|| ಪೇ
ರ್ಬಾಗಿಲಂಬಂಧಿಸಲ್ಕೆ ಪೊರಬಿಡ್ದರಂ| ಗರ್ಬಿಂದಿರಿದುತಲೆಯರಿದಾಜ
ಲಂಧರನ| ಸರ್ಬಸೇನಾಸಮಗ್ರಂಶುಂಭನಾಜ್ಞೆಯಿಂಕೋಟೆಯಂ
ಪತ್ತುತಿರಲು||ಕೊರ್ಬಿನಿಂದಿಕ್ಕಾಲರಾಳ್ವೇರಿಯಂಪತ್ತು| ತೋರ್ಬ
ರೊರ್ಬರಪಟಿಬಿಸುತಾಗದಾನವರ| ಪೆರ್ಬಲವಕಡಿದಿಳುಪುತಿರಲು
ಸುರರುರುಬಿದರದೇನೆಂಬೆನಚ್ಚರಿಯನು||೨೬|| ಹರಿಗೆಬಲುಹಗ್ಗಿಗ
ಳಲುರಿಯಮುಂಗುಬ್ಬಸಂ| ನಿರುತಿಗತಿಸಂಕಟಮುಗುಳ್ದೀಜಲೇಶಂ
ಗೆ| ಮರುತಂಗತಲ್ಲಣಂಯಕ್ಷಪತಿಗಾಸರೀಶಾನಂಗೆಬೆಟ್ಟತಾಯ್ತು|| ಪು
ರದೊಳಗೆಪೊರಗೆದೇವಾಸುರರೊಳಿವರ್ಗೆ| ಪರಿಗಣನೆಮಿಲ್ಲೆಯದು
ದಾನವತರ್ಮತನಗೆ| ಪರಿಪರಿದುಮುತ್ತಿದರ್ಸುತ್ತಿದರ್ಪತ್ತಿದರ್ಕೋ
ಟೆಯಂಸಾಹಸದೊಳು ||೨೭|| ಕೂಡೆಗಜಬಜವಾಯ್ತುಮನೆಮನೆ
ಯಕದಗಳಂ| ಪೂಡಿದವೈರ್ಯಬಂಗಾರಗಳನುಗಿದುಮರೆಮಾಡಿದ
ರುಕ್ಕೈವೆರಳ್ಗಳನೊತ್ತಿಕೊಳುತ್ತೆಕಳವಳಿಸಿದರ್ಕಾಮಿನಿಯರು|| ಬೇಡ
ಕಳುಹಿದರವರವಸ್ತುವಂಕೊಡದಿಂತು । ಮಾಡಬಹುದೇಪಾಪಿದೇ
ವೇಂದ್ರತಾನೆಲ್ಲಿ । ನೋಡುತಿರ್ಪನೊಕ್ಕಟ್ಟೆವೆನುತಪುರಜನವಳಲು
ತಿರ್ಪಸಮನಂತರದೊಳು ||೨೮|| ಕಂಡರಲ್ಲಲ್ಲಿಧೊರೆಗಳ್ವರುಣದಿ
ಕ್ಕಿನೊಳು । ದಿಂಡುಧರಿಸುವಸುರರಕೋಂಟೆ ಪೋದುದೆನುತ್ತ ।

ಖಂಡೆಯಂಗಳ ಕಿತ್ತು ಬಾಯ್ವೊಯ್ದು ಬೊಬ್ಬಿರಿದು ಪರಿದರಿರಿಕಡಿಯೆ
ನುತ್ತೆ॥ ಕಂಡು ದಿಲ್ಲವೆ ಜೀಯ ಪಡುಗಡೆಯ ಕೋಂಟೆಯಂ। ಕೊಂಡರವ
ರೆಂದು ಸುರರು ಪಿಯೆ ಖತಿಯಿಂದ ಬಾ। ಖಂಡಲಂ ಬಿಟ್ಟ ಸೂಟಿಯೊಳೈದಿ
ದಂ ನೆರದಮಂತ್ರಿಗಳಗಡಣದಿಂದಂ॥೧೯॥ ಕಿತ್ತಾಯುಧದೊಳಿಂದ್ರಮು
ಖ್ಯದಿಕ್ಪಾಲಕ। ರ್ಕುತ್ತಿದರ್ಕುಸುರಿದರಿದತ್ತರ್ವಿದರ್ಕೊಂದೆಸೆಯೊ।
ಳೊತ್ತಿದಸುರಭಟರ್ಪರಭಟರವುಂದಳೆಯ ಪಿಡಿದು ಘನಮುಷ್ಟಿ
ಯಿಂದಂ॥ ನೆತ್ತಿಯಂ ಬಡಿದರುರೆ ಕೂರಂಬಿನಿಂ ಪೆಯ್ಯೆಯು। ಮುತ್ತಿದರ್ಬ
ಹಳಭಂಗಂಬಡೆದು ಕದನಮಂ। ನಿತ್ತರಿಸಲಾರದಾಳ್ವೇರಿಯಿಂ ಕೆಡೆದರ
ಗಳೊಳಗಾಗಲಸುರಭಟರು॥೨೦॥ ಅನಿತರೊಳು ದಿನಪನಪರಾಂಬು
ನಿಧಿಗೈದಿದಂ। ದನುಜೇಂದ್ರನತ್ತ ಸೇನಾಸಮುದ್ರಂಬೆರಸು। ಘನವಿ
ಭವದಿಂ ಸುತ್ತಪಾಳೆಯವನಿಳಿದನಿತ್ತಲು ಪುರದೊಳಮರೇಂದ್ರನು॥
ಮನದದುಮ್ಮಾನದಿಂ ದಿಕ್ಪಾಲಕರ್ವೆರಸಿ। ಮನೆಗೆ ಬಂದೇಕಾಂತಭ
ವನದೊಳು ಕುಳ್ಳಿರ್ದು। ತನಗೆ ಕಾಳೆಗದ ಸಂಕಟವನಮರಾಚಾರ್ಯ
ನೊಡನಾಗಳಿಂತೆಂದನು॥೨೧॥ ದುರ್ಗಮಿದು ಮಾನವಮಾನ್ಯ ಮೋಯಿಗಂ
ಕಾಟಿಹಭ। ಟರ್ಗಳೇನಲ್ಪರೇ ಸಂಗರದಪರಿಕರದ। ವರ್ಗಮಿಲ್ಲವೆ ಶಿ
ವಶಿವಿಂತಪ್ಪುದನ್ನಿಮಿಷಮಾತ್ರದೊಳು ಕೊಂಡರವರು॥ ಭರ್ಗನಕಟಾ
ಕ್ಷದಿಂದುಳಿದುದಲ್ಲದೆ ಭ। ಟರ್ಗಳಂ ಕಡಿದಿಳಿಪಲೆಮ್ಮಳವೆ ಯಿನ್ನು ಹಿ
ದು। ಮಾರ್ಗಮುತ್ತದಯದೊಳಗವರುರು ಬೆತ್ತರಿಸಬಾರದಿಂನೆಂ
ತೆಂದನು॥೨೨॥ ಲೇಸನಾಡಿದೆ ಸುರಪ ಇನ್ನಿರಲು ಖಳರಿಂದೆ। ಗಾಸಿ
ಯಾಗದೆ ಮಾಣೆವೇವಸ್ತು ವಾಹನ। ಕ್ಲಾಸೆ ಮಾಡದೆ ಸತ್ಯಲೋಕಕ್ಕೆ
ದುವದುಚಿತವೆಂದು ಗುರು ಮಾಡಲೊಪ್ಪಿ॥ ವಾಸವಾದ್ಯರಿಳಿದು ವಿಜಯತ್ತ
ಮ್ಮ ನಿಜರಾಣಿ। ವಾಸಸಹಿತಹನೆಡೆಗೆ ಬರೆ ಕಂಡು ವಿಧಿಪೀಠ। ವಾಸ
ನಲ್ಲಿಗೆ ಕರೆದು ತಂದು ಬಿನ್ನವಿಸಿದಂ ನಿಜಕಾರ್ಯಸಂಗತಿಯನು॥೨೩॥
ಖಳಜಲಂಧರನೆಂಬವಂ ಪೆಟ್ಟಿ ಸ್ವರ್ಗಮಂ। ಸೆಳೆದು ಕೊಂಡಮರರಿರ್ದ
ಡೆಯು ಭೇದಿಸಲಿಮ್ಮ। ಬಳಿಗೆ ಬರಲಿಲ್ಲಿಗೊಡಗೊಂಡು ಬಂದೇಂ ಸುರರ
ಕಾಮ್ಯದೆನೆ ಹರಿಮನದೊಳು॥ ತಿಳಿದಾ ಜಲಂಧರಂ ಹರನಲ್ಲದುಳಿದರಿಂ।
ದಳಿವನಲ್ಲೆಂದು ನಿರ್ಧರಿಸಿದೂರಂಕೇಳ್ದು। ತಳುವದಲ್ಲೆಂದು ಹರಿ ಸಕಲ
ಸನ್ನಾಹಮಾಗಿರಲಿತ್ತಲಸುರೇಂದ್ರನು ॥೨೪॥ ಕಾಳೆಗಕೆ ಸಂಹರಿಸಿ
ಕೊಂಡರಸುರರು ಮೊರೆವ। ಕಾಳೆಗಳ ಸನ್ನೆಯಿಂ ಪಣ್ಣಿದಿಭ ಹಯಮ
ರೂ। ಥಾಳೆಗಳು ನಡೆದವಾಸಮಯದೊಳು ಚರನೋರ್ವನೆ ಸುರಪತಿ
ಯೆಡೆಗೆ ಬಂದು॥ ಪೇಳಲೇನಮರಪರ್ಲಾಯನವಗೈದರೆನೆ। ಕೇಳಿಸಂ

ತೋಷದಿಂ ನಿಜಬಲಂಬೆರಸು ಬಳಿ| ಪಾಲನಮರಾವತಿಯ ಪುರದಸಿರಿ
ಯು ನೋಡುತೊಳಪೊಕ್ಕು ಬರುತ್ತಿರ್ದನು ||೩೫|| ಧರಥರದ ಬಾಗಿಲ್ಗ
ಳೋರಣದ ತೋರಣದ| ಪರಿವಿಡಿಯೊಳೆಸವ ಸೌಧಾಳಿಗಳ ಪಾಳಿಗಳ|
ಪರಿಖಚಿತ ರತ್ನಗೃಹವೀಧಿಗಳ ವೀದಿಗಳ ಸಂದಣಿಯ ಪೌರಜನದ|| ಚ
ಲಿಸುವ ಪುರಂಧ್ರಿಯರ ನೋಟಗಳ ಬೇಟಗಳ| ಪರಿರಂಜಿಪಖಿಳ ಗಜರಾ
ಜಿಗಳ ವಾಜಿಗಳ| ಪರಿಪರಿಯ ಚೆಲ್ವಗಳ ಸೊಂಪುಗಳ ಪೆಂಪುಗಳ ಸಂಭ್ರ
ಮಂ ಕಂಗೆಸದುದು ||೩೬|| ಆದರದೊಳಾ ಪುರದ ಸೊಬಗ ನೋಡುತ
ರಾಜ ಬೀದಿಯೊಳ್ಬಂದು ಬಳಿಪತಿ ಸುಧರ್ಮೆಯೊಳ್ ತ್ರಿವಿ| ನೋದದಿಂ
ಕುಳ್ಳಿರ್ದು ಪಟೆಗಳಂ ಕರೆದು ಕಾಣಿಸಿಕೊಂಡು ಜಂಭಗಂದು| ನೋದದಿಂ
ದಂಪಟ್ಟಮಂ ಕಟ್ಟಯುಗ್ಗಿವುಂ| ತಾದ ದಿಕ್ಪಾಲಕರ ದುರ್ಗಂಗಳೆಲ್ಲವಂ|
ಭೇದಿಸುತ್ತವಕ ತಾನೆ ಯಮಿ ಟ್ಟು ಗರಿಯುವಸ್ತುಗಳಂ ವಿಚಾರಿಸಿದರು||
ಚರರಾಗ ಬಿನ್ನವಿಸಿದರು ಜೀಯ ಸುರಪತಿಯು | ಪರಮ ವಸ್ತುಗಳೆಲ್ಲ
ಮಂ ಕೊಂಡು ತಾ ಮಣಿಯು | ನಿಂದೊಯ್ದರೆಂದು ಸುರೆ ಕತೆ ಜಲಂಧರ
ನೆತ್ತ ಪೋದರೆಂದು ವ್ಮ್ರೆಳಿಸಲು|| ಕರಕ ಮಂಡಲ ದಂಡ ಕಾವಿ ಕಾಷಾಂ
ಬರಂ| ಪರಿರಂಜಿಸಲು ಶುಭ್ರ ಜೇಮೂತ ಮಿಳಿಗಿರ್ಪ | ಪರಿಯಂತೆ ನಾ
ರದಂ ಕಲಿಜಲಂಧರನ ಮುಂದಿಳಿದ ನಾಕಾಶದಿಂದಂ ||೩೮|| ಏಳ್ದು ಸಿಂ
ಹಾಸನದಿ ನಾಮುನಿಯ ಚರಣದೊಳು | ಬೀಳ್ದೊಡಾ ಶೇರ್ವಾದ ಪ್ರಾ
ರ್ವಕಂ ನೆಗಪಿ ಬಳಿ | ರತ್ನ ಸಿಂಹಾಸನದೊಳೊಲ್ದು ಕುಳ್ಳಿರ್ದು ನಿನ
ಗೇತಕೀ ಚಿಂತೆ ಯೆನಲು|| ಕೇಳ್ದು ನಲ್ಲಿದಿ ವಿಜಮಣಿ ಪೆರಸಿ ಸುರಪಂ
ತೆ| ರಳ್ದ ನಾ ವಲ್ಲಿಗೆಂದರಿಯೆ ವನೆ ನೂರಣಂ| ಪೇಳ್ಟು ನಾ ವೈಕುಂಠದೊಳ್
ಗಿಂದ್ರ ಮುಖ್ಯ ಸುರನಿವಹಮಂ ಕಂಡೆನೆಂದು ||೩೯|| ಆ ನುಡಿಗೆ ಘುಡು
ಘುಡಿಸುತಿಂದ್ರನಂ ಬಂದಿಕ್ಕಿ| ತಾನೆ ಮ್ರ ನೆಣಿಸಿ ಬಾಳ್ವ ಪನೆ ಹರಿಯೆಂ
ದೊಡನೆ | ದಾನವಾಧೀಶ್ವರಂ ಕೂಚು ಮಾಡಿಸಿ ತೆರಳ್ದಂ ಮಹಾವೇಗ
ದಿಂದಂ|| ಸೇನೆ ನಡೆದುದು ವಿಷ್ಣುಲೋಕ ಮಾರ್ಗಂ ಬಿಡದೆ | ದೇಸೆಂಬೆ
ನ್ನೈರಾವು ಸಕಲ ಸನ್ನಾಹದಿಂ| ಯಾನವಾರಿಯ ಪುರಸಮೀಪಕ್ಕೆ ಬಂದ
ನದನೇನೆಂಬೆನಚ್ಚರಿಯನು ||೪೦|| ಇಂತೆಸವ ಚನ್ನಬಸವೇಶ್ವರ ಪುರಾಣ
ಮಂ| ಸಂತಸಬರದವರೊಲ್ದು ಬರೆದರ್ಗೆ ದ್ರಾ| ದ್ಯಂತಮಂ ಬಿಡದೆ ಪೇ
ಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ|| ಸಂತತಂ ಸಕಲಸುಖಮಂ
ಸಕಲ ಭೋಗಮನ| ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ| ಕಂ
ತುಹರನ ಪರಾವತಾರನೆನಿಸುವ ಚನ್ನಬಸವೇಶನಕ್ಕರಿಂದಂ ||೪೧||

ಎರಡನೆಯ ಕಾಂಡದಲ್ಲಿ ೧೩ ನೇ ಸಂಧಿ ಮುಗಿಯಿತು

## ೧೪ನೇಸಂಧಿ.

ಸೂಚನೆ॥ ವರಜಲಂಧರನೊಡನೆ ಹರಿಯಜೇಂದ್ರಾದ್ಯರುಂ । ಧುರದೊಳಿದಿರಾಗಲವರೆಲ್ಲರಂ ತನ್ನ ನಿಜ । ಪುರಕೆ ಪಿಡಿತಂದು ಸೆರೆಯಿಟ್ಟಖಿಳಲೋಕಂಗಳಂ ಪಾಲಿಸುತಿರ್ದನು॥

ಪದ॥ ಗರಳಗಳ ಪರಮ ಬಳೆವರಸೋಮಧರ ಭೀಮ । ದುರಿತಹರ ಶರಣವರ ಗಿರಿಜಾಪಹರ ತಾಪ । ಮುರಮಥನನುತ ಕಥನ ಸುರರಕ್ಷ ನತಪಕ್ಷ ಖಲದಕ್ಷಯಾಗಶಿಕ್ಷ । ಪುರವಿಜಯ ನುತವಿಜಯ ಫಣಿಭೂಷ ಜಿತದೋಷ । ಕರಿವೇಷಗಾಳಿನಾಶವ್ಯಧುಭೂಷಗಸ್ತೋಷ । ಗಿರಿಜೇಶ ಭವಪಾಶಹರಹರ ವಿರೂಪಾಕ್ಷ ನಿರಪೇಕ್ಷ ಸಲಹೆಂಮನು॥೧॥ ಕೇಳ್ದನೀವಾರ್ತ್ತೆಯಂ ಹರಿಮುಖಾಟೋಪಮಂ । ತಾಳ್ದನಂದಜಿಳಸೇನಾತತಿಗೆ ಪಯಣಮಂ । ಪೇಳ್ದನಾಗಳು ಸಿಂಹಪೀಠದಿಂ ಹರಿಯಜೇಂದ್ರಾದಿಗಳ ಗಡಣದಿಂದಂ॥ ಏಳ್ದಡೆದಂ ಸಮರಭರನಾಗಿ ಬಳಿಯೊಳುತ್ತೆ । ರಳ್ದಿಭಹಯ ರಥಪದಾತಿಬಹುಕೋಟಿಸುರ । ರಾಳ್ದನಭಟಪ್ರತತಿ ಬೊಮ್ಮನ ಚತುರ್ಬಲಂ ಸಂಗರಳಿ ಸಂಭ್ರಮದೊಳು॥೨॥ ಆನೆಗಳ ಸಂಖ್ಯೆ ತ್ವೈಧಿದವೃತುರಗಸಂ । ತಾನಂಗಳಗಣಿತಂ ನಡೆಗವಿನಿಬರಮುಪಾ । ಸೇನೆಗಳ್ಗಮಿಸಿದವನೇಕಂಗಳನುಪಮವರೂಥಾಳಿ ಕದಲಿತೆಂದು ॥ ಏನೆಂಬೆನೀಹರಿಯ ಸಮರಭರವಂ ಕೇಳ್ದು । ದಾನವಾಧೀಶ್ವರಂ ರೋಷಭೀಷಣನಾಗಿ । ತಾನಿರದೆ ವೈಕುಂಠಪುರಕತಿಸವಿಷಾದದೊಳು ಬರುತಿರ್ದನಾಕ್ಷಣದೊಳು॥೩॥ ಸಂಧಿಸಿದುದಬ್ಬರ್ಲಂಘನಶರಧಿಶರಧಿಗ । ಳ್ಸಂದಿಸುವಮಾಳ್ಕೆಯಂ ಪಡೆತರದ ಗಿರಿಗಿರಿಗ । ಳೊಂದಾಗುವಂತುಭಯಸೈನಿಕದ ಚೂಣಿಗತಾರ್ಗಿದರ್ಥರವಸದೆಳೊಳು॥ ಒಂದೆಸೆಯೊಳೆಚ್ಚಾಡಿದಬಿರ್ಗಳ್ನವ ರ್ಕ್ಕತ್ತ । ನೊಂದೆಸೆಯೊಳಿರಿದಾಡಿಗರ್ಬಳಿಸವರಿಂತು । ಮುಂದುವರಿದಿರಿದಾಡಿಮಡಿವುತಿರ್ದ್ದರ್ಪೇಳಲೇನಂದಿನಾಹವವನು॥೪॥ ಕುದುರೆಗಳ್ಕುದುರೆಗಳೊಳೊತ್ತಿದವು ಮುತ್ತಿದವು । ಮದಗಜವನಾನೆಗಳ್ತಾಂಕಿದವು ನೂಂಕಿದವು । ಪದಚರರ್ಪದಚರರೊಳು ಬಿದರ್ತರು ಬಿದರ್ದ್ದನಾಯುಧಂಗಳಿಂದಂ ॥ ಅದಟನಿಂ ರಥಿಕರೆಚ್ಚಾಡಿದರ್ಮ್ಮಾಡಿದ । ರ್ಪ್ರದಮುದದ ಸಮರಮಂ ರಾವುತರ್ಮಾರ್ವೃತೆ । ಸರ್ದೆವಾಡಿದರ್ಘಾತಪ್ರತಿಗಳಿಂ ಬತಿಗಳಿಂದುಭಯಬಲಮೇನೆಂಬೆನು॥೫॥ ಅರಿಮರ್ದ್ದಿವಿಜನಾಯಕರೊಳಿಶಿವಶಿವಮುಪಾ । ವೀರರ್ಕ್ಕೆತಪ್ಪಲ್ಗತಮ್ಮನಗರದಸೂಳೆ । ಗೇರಿಯೊಳ್ಪಂಥಮಂ ನುಡಿದು ನಿಲ್ಲದಮೂಗುಮಾರಿಗಳ್ನೀವಹುದಲಾ ॥ ವಾರಿಜಾಕ್ಷನೆ ನಿಮ್ಮ ಹಿಂದಿಕ್ಕಿಕೊಂಬವ್ರೈ । ಕಾರಿಗಳಕರುಳುಗಳ ತೆಗೆಯೆನುತ

ವಿವಿಧಪ್ರಹಾರದಿಂ ಮೂದಲಿಸಿ ಸವರಿದರ್ದಿವಿಜರಂದನುಜರತಿಕೋ
ಪದಿಂದಂ ॥೬॥ ಕಳ್ಗಡಿಕತನದಿಂ ಬಗುಳ್ದೊಡೆಲವೆಲವ್ರೋಕ| ಟ್ಟಾಳ್ಗ
ಳೇ ಕಾಳೆಗಕೆ ನೀವಿಗ ಪೇರೊಡಲ| ಸೀಳ್ಗಳಂತಣಭೂತವೇತಾಳಸಂ
ಕುಲಕೆ ಬಡಿಸುವೆವು ನಿಲ್ಲಿರೆನುತ॥ ಬಾಳ್ಗಳಂ ಜಳಪಿಸುತ ಸುರಭಟರ್ದ
ನುಜರಂ| ಹೊಳ್ಗಳೆದುಕೊಂಡು ಬರುತಿರೆ ಕಂಡು ಪದಹತಿಯ| ಧೂ
ಳ್ಗಳಿನನಂ ಮುಸುಕೆ ಶುಂಭಧೂಮ್ರಾಕ್ಷಾದಿಖಳಭಟರ್ಮುಂಕೊಂಡರು
ರಾಕ್ಷಸರಸೇನೆಯೊಳ್ಘೋರೆಘೋರೆಗಳ್ಳೈದುವದ । ನೀಕ್ಷಿಸುತ ದಿವಿಜ
ನಾಯಕರತುಳರೋಷತಾ । ಮ್ರಾಕ್ಷರಾಜೋಣಗರಪಿಂತ್ರಿಕ್ಕುಳಪ
ತಿಗಳಂ ತಡೆದು ಬೊಬ್ಬಿರಿವುತ ॥ ಅಕ್ಷಿಗೆಕ್ಕರಿಯೆಂದೆನಲ್ಕೆ ಲಾಹವಲ
ಕ್ಷ್ಯ| ಲಕ್ಷಣಮುಹಾಸ್ತ್ರಂಗಳಿಂದೆಸವುತಿರಲಾಗ| ಲಕ್ಷೀಣಸತ್ವರೆಚ್ಚಾಡಿ
ದರ್ದೇವಾಸುರರ್ಘೋರಸಂಗರದೊಳು ॥೮॥ ತಡವರುರುಬುವರೊರ್ಕ್ಕೆ
ಸೈರಿಸದೆ ಪಿಂದಕಡಿ| ಯುಡುವರೋರೋರ್ಕ್ಕೆ ಯೊತ್ತುವರೋರ್ಕ್ಕೆ ರಿಪು
ಗಳಂ । ಕಡಿವರೋರೋರ್ಕ್ಕೆ ತಾಗುವರೋರ್ಕ್ಕೆ ತವಕಿಸುವರೋರ್ಕ್ಕೆ
ಸೈರಿಸುವರೋರ್ಕ್ಕೆ ॥ ಬಿಡದೆ ಜತವರದೋರ್ಕ್ಕೆ ಬಿಂಕದಿಂ ಮುಸಗಿ ಬೊ|
ಬ್ಬಿಡುವರೋರೋರ್ವರ್ ಬೀಗುವರೋರ್ವರ್ ಪಂಥಮಂ । ನುಡಿವ
ರೋರೋರ್ಕ್ಕೆ ಖತಿ ಮುಸಗಿ ಕಾದುವರೋರ್ಕ್ಕೆ ದೇವಾಸುರರ್ಧುರದೊ
ಳು ॥೯॥ ಕರದಖಂಡೆಯದಭೀಕರಭಟರ್ಮ್ಮೂದಲಿಸಿ । ಕಟಕರಗುಪೆ
ಗೆಗಳಂ ಕಚಮುತ್ಕಾರದಿಂ । ಕರಮುರುಬಿತರು ಬಿಪೊಕ್ಕಾವರಿಸಿ ಇ
ರಿದರಿದು ಕರಚರಣಮಂ ಖಂಡಿಸೆ| ಹರಣವಾಸೆಯನುಳಿದು ಸನದೋ
ಡುವ ಹಿತವೋ । ಹರದೊಳಗೆ ಬೇಸಬೇಸರದೆ ದೆಸೆಣಸಿಸಂ | ಸ
ರಣಕಾಲಾಗಕಾಲಸರಣಕೋಪದೊಳಿರಿವ ಸರಸನೇಂ ಬಣ್ಣಿಸುವೆ
ನು ॥೧೦॥ ಇರಿವ ದನಿ ಕರೆವ ಕೋಳಾಸಳಂ ಪೆಗೆಗಳಂ । ಮುರಿವ ಬೊ
ಬ್ಬಾಟ ಮೊತ್ತವ ಕಡುಪು ಮೂದಲೆಗೆ| ಮುರುಕಿಸುವ ಬುಬ್ಬ ವಂಚಿ
ಪಲಾಗು ತವಕಿಸುವ ಚಿತ್ತವಾರ್ಭಟಿಸುವ ಘಟು| ಮುರಿದು ದಮು ರಾ
ಸುರರ ಘಟ್ಟನೊಳ್ಬಿಡದೆ ಕುರಿ| ದರಿದ ಪೆಣಗಳ ಮೂಳೆಗಳ ಬಸಿಯು ಮಿ
ದುಳ ಜುರು । ಮುರಿಪ ಪೊಸನೆತ್ತರಿನ ಪೊಳೆಯ ಮುಳ್ಳದೆ ಕಾಣೆನಾರ
ಣಾಂಕಣದೆಡೆಯೊಳು ॥೧೧॥ ಕೋಟೆಯೊಳಗಿರ್ದು ಕಾದುವ ಡಂಜನಡು
ವಿರುಳು । ಕೋಟಲೆಯೊಳೋಡಿದವರಿದಿರಾಗಿ ಖಳರಪ್ಪೊ | ಯ್ದಾ
ಟಮಂ ಸೈರಿಸದೆ ಬೆಂಗೊಟ್ಟು ಮುರರಿಂದ್ರಂ ಕಾಣುತೆಂ ಮುಭಟರ ॥ ಪ್ರೋ
ಟಮಂ ಕಂಡಿರೇ ಕವಿವ ದಾನವರ ಬೊ । ಬ್ಬಾಟಮಂ ಕಂಡಿರೇ ನೀವೆನ
ಲ್ಮಾತ್ರ ಧವಂ| ತೋಟಯಿಂದನುಜೇಂದ್ರನೊಡನೆ ಸಗಬೇಕೆನುತೆ ನೂಂ

ಕಿದಂ ಮಣಿರಥವನು ||೧೨|| ಬಿಡುಗಣರಾಳ್ಗಳಂ ಪಿಂತಿಕ್ಕಿದನು ಜಾರಿ| ನಡೆವುದಂ ಕಂಡು ಕಾದುವ ದೈತ್ಯನಾಯಕರ್| ಸೆಡೆದೋಡಿ ಕಲಿ ಜಲಂಧರನ ಮರೆಯಂ ಪೊಗಲ್ಕವನಾಕ್ಷಣಂ ಕನಲ್ದು || ನುಡಿದನೀತಂ ವಿಷ್ಣವೆ ಎನ್ನೊಳಿಂದು ತಾಂ| ತೊಡಕಲ್ಕೈತರ್ಪನೋ ಲೇಸೆನುತ ಚಾಪಮಂ| ಮಿಡಿಗುರಥಮಂ ನಡಿಸೆ ಶಾರ್ಙ್ಗಮಂ ಜೇಗೈದು ಕಮಲಾಕ್ಷನಿಂತೆಂದನು||೧೩|| ಈಸುದಿನವೆನ್ನೊಡನೆ ಕಾಳಗದೊಳಿದಿರಾಗಿ| ಘಾಸಿಯಾಗದ ದೈತ್ಯರಿಲ್ಲ ದನುಜಾರಿಯೆಂ| ಬೀಸಘಾಟದ ಪೆಸರನರಿದು ನೀಂ ಬಂದು ದರ್ಪಾನಕ್ಕೆ ತಪ್ಪೇ ಸಹಜವು || ಹೊಸಕವನಾಡದಿರು ನಿನ್ನ ಪೆಸರಾವುದಾ| ನಾಸನಾವೆಡೆ ಪೇಳ್ವುದೆನೆ ದನುಜಪತಿ ಮುಂದ| ಹಾಸದಿಂ ನುಡಿದನಬುಜಾಯತಾಂಬಕನೆಂದ ಮಾತಿಗಿದಿರುತ್ತರವನು||೧೪|| ದಾನವಾರಾತಿಯೆಂದೆಂಬ ಗುಣನಾಮದಿಂ, ನೀನಿರ್ಪುದಂ ಕೇಳ್ದು ದಂಬಿಡಿಪ ಭರವಸದಿ| ನಾನೈದಿದೆಂ ಜಲಂಧರನೆಂಬುದೆನ್ನ ಪೆಸರಾ ಸಂಜ್ಞೆನುತ್ಪತ್ತನಂ| ಈ ನಿಳಿಂಪೇಶನಂ ಹಿಂದಿಕ್ಕಿಕೊಂಡರುಹೆ| ಗಾನರಸನಾಷಧಿಯನೆನುತ ಸತ್ತಂಬಿನಿಂ| ದಾನವಾರಿಯನೆಸೆಯಲದೆ ತೊಳೆವ ತಡೆಗಡಿದು ಕಾಮಪಿತನಿಂತೆಂದನು ||೧೫|| ಅಗಿರ್ನಿತುಗುಣಮುಂಟು ನಿನ್ನಂತೆ ಬಡಸುರತ| ದುರ್ಗಮಂ ಕೊಂಡವರ ಪಟ್ಟಿತೊಡೆ ನೀಂ ಜಗದೊಳಗರ್ಳನೆ ನಾಡಬನಮೇಲೆ ಕವಿತೈ ತಪ್ಪು ಕಡಲ ನೀಂ ಕ್ಷಿಂ ನಬರವು|| ಮಾರ್ಗಮುಗ್ಗರಿಯದೈ ಕಂಗೊಡಂ ನಾಂ ತೆಟ್ಟ| ಮಾರ್ಗಣಮನಿಳಿಪುವೆಂ ಪೋಗು ಪೋಗದೊಡೆ ಕೆಂ| ನೀರ್ಗಳೊಳ್ ಕುಳಿಗೆ ಸಂವರಿಸಿಕೊತ್ರೈನುತ್ತೈಗು ಬಾಣನಿಂ ಸರಿಯೆಸ್ತನು||೧೬|| ನೊಂದನಸುರಂ ಘಾಯದಿಂ ಘಾಯದಿಂ ನೊಂದ| ಪಂಬಿಯುಂ ತಾಂ ಪ್ರಟಿಸಿ ಸರಂದಂಬುಗಳ| ನಂದವಂ ಪಸರಿಸಿದನುಬ್ಬಿನಿಂದೊಂದೊಂದರೊಳ್ ಕ್ರಮನಾಲ್ಕ್ ಗು ನೂರು|| ಮುಂದೆ ಸಾಸಿರ ಲಕ್ಷಕೋಟಿ ಸಂಖ್ಯೆಗಳೊಳ್| ರವಿಂದನಾಭನನೆಸ್ಪನಾತನೀ ಪರಿಗಣನೆ | ಗೊಂದೆರಳ್ಕ್ರ ಡಿಯ ಧಿಕವೆಂಬಂತೆ ಕರೆದ ಸಂಬಿನ ಮಳೆಯನಾಕ್ಷಣದೊಳು ||೧೭|| ಕವಿದವಿಟ್ಟಣಿಸಿದವು ನೊಂಕಿದವು ತಾಂಕಿದವು| ಜವಗೆಡಿಸಿ ಸೇನೆಯಂ ಮುತ್ತಿದವು ಕುತ್ತಿದವು| ರವಿರಥ ತುರಂಗಮಂ ಚುರ್ಚಿದವು ಕರ್ಚಿದವು ತಮತಮಗೆ ತಾರಕಿಯನು || ಬವಣೆಯಿಂದಂಬರದೊಳುರ್ಬಿದವು ಪರ್ಬಿದವು| ಘನಸಂಗಳನಿತರೋಳ್ಪತ್ತಿದವು ಸುತ್ತಿದವು | ಹವಣಿಸುವಡರಿದೆನಿಸಿ ಕೆಡಪಿದವು ಮಡಪಿದವಸುರಭಟರ ಬಾಣಂಗಳು||೧೮|| ಎಟ್ಟಂಬನೊಡನೊಡನೆ ಕತ್ತರಿಸುವರ್ಬಳಿ| ಕೆಟ್ಟು ಬೊಬ್ಬಿರುವರೋರೋರ್ವರ ರಥಂಗಳಂ| ಕೊಟ್ಟುವರೊಪ್ಪಸ

ಷ್ಟಿಂ

ರಥವೊಳ್ಕೈದು ವಘೋರ್ಗಯದಿಂ ಮೂರ್ಛೆವೆರ್ಚೆ ತರಿಪರು॥ ಮುಚ್ಚು
ನೋರ್ಗಯ್ಯರಶ್ವಧ್ವಜವನೊವ್ವೊವ್ವ। ಮುಚ್ಚು ವಘೋರ್ಗಯಘಾಯ
ಕೆರಣಾವೇಶದಿಂ। ನಿಟ್ಟಟವದಕಟ್ಟಿಗಳೆಚ್ಚಾಡಿದರು ಹರಿಜಲಂಧರರಂದು
ಸಂಗರದೊಳು ॥೧೯॥ ವಿಕ್ರಮದೊಳೆಚ್ಚರನೆಸುವಂತಚ್ಚರಂಗಳಂಚೆ
ಕ್ರಿಕತ್ತರಿಸುತೆಸುವಂ ಹರಿಯುಬಾಣವುನ। ನುಕ್ರಮದೊಳಾಖ
ಳಂತರಿದೆಸುವನಾಗಳೇಖಂಡಿಸುವನಬುಜಾಕ್ಷನು ॥ ಈಕ್ರಮದೊ
ಳೆಚ್ಚಾಡುತಿರಲೊಂದುಬಾಣದಿನ। ತಿಕ್ರಮಿಸಿಹರಿಯೆಸಲ್ದನುಜನಂ
ದಾಕಾಶ। ಚಕ್ರದೊಳುರಥವೆರಸಿಹಾರಿದಂಕೇರಿದಂಕೋಪದಿಂಬೊ
ಬ್ಬಿರಿವುತ॥೨೦॥ ಸಾಹಸವನೇನೆಂಬೆನಾಗಸಕಡದುರ್ಗವು। ತ್ತಾಹ
ರಿಯುನಸುರನೊಂದಂಬಿಂದೆಸೆಯೆಬಳಿ। ಕ್ಕೇಹರಿವರೂಥವುಂಬೆರಸಿ
ಗಗನಕ್ಕೈದಲೋರ್ವರುಂಧರೆಗಿಳಿಯುದೆ॥ ಆಹೊಳೆವತೇರ್ಕಿಂಚುಬಿ
ಲ್ಲವನಿವೊಳಗತವ। ದೇಹರುಚಿಗಳ್ಪ್ರಳಯವೇಘವೆನಲೆಸವಸರ।
ಳೊಹಿಸಲ್ಕಡೆಗಾಲವಳಿಯಾಗಳೆಚ್ಚಾಡುತಗ್ರದನೇವೇಳ್ವನು॥೨೧
ಅಂಬರದೊಳೊವ್ವೊವ್ವ ಕಾಗುವರ್ಧರೆಗಿಳಿವ। ತಂಬಿಡದೆಸೆಣಸು
ವರ್ದರೆಯೊಳೋರ್ವರ್ಗಗನ। ಮುಂಬರಿಯು ತೋರ್ವರಿರದೆಚ್ಚಾಡು
ವರ್ಧರೆಯೊಳಿರದೆಸವರೊವ್ವೊವ್ವ॥ ಎಂಬುದೇನಾಜಲಂಧರ
ಸತುಳರೋಷದಿಂ। ದಂಬಳಿಕಮೂಡಿಗೆಯೊಳಾಗ್ರರಸಿಪಾವಕಕ।
ಳಂಬಮಂಪ್ರಾಡಿತೆಗದೆಚ್ಚನೀರೇಳ್ಗೆಂಗಿಂಶಿಖಿಯುಸವಿದುತ್ತಾಗಲು॥೨೨
ಎರಡುಬಲದಾಸ್ಯಮುಂಕಂದಿದವುಕುಂದಿದವು। ಕರಿತುರಗಮುರಿ
ಯೊಳೊಲಾಡಿದವುಬಾಡಿದವು। ಪರಿವತೇರ್ಗಳ್ಬೆಂದುಮುಗ್ಗಿದವು
ತಗ್ಗಿದವುಪಟುಭಟವಕ್ತ್ರ್ಯಯುಗಂಗಳು॥ ಸುರರಸರುಷಂಗಳುಂತಾಗಿದ
ವು ಬೀಗಿದವು ಕರವಾಯುಧಂಗಳುಂಕರಗಿದವುಕೊರಗಿದವು। ಹರಿಗೆ
ಹಲಗೆಗಳುರಿಗುಪಾರಿದವುಕೀರಿದವ್ವೆಸೆಗಳಿಯುಂಭೂತಂಗಳು॥೨೩॥
ಕಂಡಾಜಲಂಧರನಚಾಪದಿಂದೈತಪ್ಪ। ಚಂಡಶಿಖಿಬಾಣಮುಂಶರಧಿ
ಯಿಂದುಗಿದುಕೋ। ದಂಡದೋಳ್ತೊಡಿಸಿವರುಣಾಸ್ತ್ರಮುಂನಿಜಸೇನೆ
ಗಭಯಕರವುಂತೋರುತ॥ ಪ್ರಂಡರೀಕಾಕ್ಷನೆಸೆತುಂಬಿದುದುವಾ
ರಿರಣ। ಮಂಡಲದೊಳೆಲ್ಲಿಯುಂನೀರಾಟವಾಡಿದವು। ಶುಂಡಾಲತು
ರಗಸಂದೋಹಂಗಳಾಕ್ಷಣಂಪೇಳಲೇನಚ್ಚರಿಯೆಸು ॥೨೪॥ ಕೆರಳುರಗ
ಬಾಣದಿಂಖಳನೆಸಲ್ಮನ್ಮಥವಂ। ಗರುಡಾಸ್ತ್ರದಿಂತರಿದನಬ್ರಿಬಾಣದಿನೆ
ಸ।ಲ್ವರವಜ್ರವಿಶಿಖದಿಂಖಂಡಿಸಿದನಿನಕಳಂಬದಿಸಂಧಕಾರ ಶರವುಂ॥
ಪರಿಹರಿಸಿದಂಹರಿಬಳಿಕಾಹಕಾಸ್ತ್ರದಿನೆಸ। ಲ್ಮರುತಾಸ್ತ್ರದಿಂದದಂತೊಲ

ಗಿಸಿ ಜಲಂಧರನ । ಕರದ ಕಾರ್ಮುಕವ ನಿಕ್ಕಡಿ ಮಾಡಿ ಸೂತ ರಥ ತು
ರಗಗಳ ಖಂಡಿಸಿದನು ॥ ೧೫ ॥ ತುರಗ ರಥ ಸಾರಥಿಗಳಂ ತುಂಡಿಸಲ್ಕೋಪ|
ಭರಿತ ಮಾನಸನಾಗಿ ಕಾಯ್ದ ಕೇಸರಿಯಂತೆ । ಭರದಿನಾರ್ಭಟಿಸಿದೇ
ವಾಸುರ ಬೆರಗಾಗಿ ನೋಡುತಿರೆ ಪಾಯ್ದ ಹರಿಯು ॥ ವರವರೂಥವ
ನೆತ್ತಿ ಕರಯುಗುಳದಿಂ ನಭಕೆ| ತಿರುಪಿಡಲ್ ನಿಡು ಬೊಗರಿಯಂತೆ ಹರಿನ
ಭದಿಂದೆ| ಧರೆಗಿಳಿದು ಪೊಸ ರಥದೊಳೈತರಲ್ಕಗುಳ್ಕಟ್ಟು ಬಳನಿರದೆ ಬೊ
ಬ್ಬಿರಿದನು ॥ ೧೬ ॥ ಅಡರುವನು ಹರಿವೊಂದು ತೇರನಸುರಂಕನ| [illegible]
ಡುವನದನಿಂ ತುಟಪ್ಪುತೊತ್ತೆಂದು ಸೂಳ್ಕರಂ| ಬಿಡದೆ ಚೆಣೆಕಲ್ಲಾಡುವಂ
ತುಟಂ ಮಾಳೆಗಳನೊಗಗಿ ನಿಂದಾಡುವಂತೆ ॥ ಇಡುವ ಬಿಡುವುರುಚ
ಮತ್ಕೃತಿ ನೋಡುತಿಪ್ಪರಡು ಪಡೆಗಗೋಚರವೆನಲು ಕೂಡೆ ಕವ
ಲಾಂಟಕಂ । ಕಡುನೊಂದು ಕೋಪೋದ್ರೇಕಗದೆಯನುರು ತುಡುಕಿ
ಬಳಪತಿಯೊಳಿಂತೆಂದನು ॥ ೧೭ ॥ ಭಾರಣೆಯ ವಿನ್ಯಾಸಮಂ ಸಮರದೊ
ಳ್ತೋರದೊಡೆ| ಧೀರರೇಂ ಮೆಚ್ಚುವರೆ ಮಧುಕೈಟಭಾರ್ಯಾಸಿಳ ವೀರ
ರಂ ಸದೆದು ದೀಗದೆಯುದರ ಸವಿಯು ನೀ ಸೋಮ್ಯಯುಂ ಕಂಡಪಯುಲಾ ॥
ಪಾರದೆಡಬಲ ಸನ್ನುತ ಗದಾದಂಡದಿಂ । ದೀರಣದೊಳಿರಿದಾಗ ಕಾ
ಣ ಬಸುದುಭಯ ಬಲ| ವೀರ ಪ್ರವೀಣತೆಯನೆನುತೆ ಹರಿನುಡಿಯ ಲಾ
ಬಳನಿರದೆ ಗದೆಗೊಂಡನು ॥ ೧೮ ॥ ಕಸ್ತೂರಿ ಜವಾಜಿ ಕುಂಕುಮಾದಿ
ಯಾಗಿಸಸ । ಮಸ್ತ ಪರಿಮಳವನುಂಪಿಟ್ಟು ಮುಬುಕ ಮೊಲವಿ । ಸ್ವಸ್ತ್ರ
ಕ ಪೂರ್ವರ ತಾಂಬೂಲಶೋಭಿತರಾಗಿ ಬಿಗಿದಿಗಳಂ ತಿರುಪುತ ॥ ಮಸ್ತ
ಕದ ಮಣಿ ಮಕುಟ ದೊಲಕುಗಳ ಭೂಷಣಗ| ಳಸ್ತ್ರಗಳ ಹರಿ ಜಲಂಧರ
ರಾಗರಾಗದಿಂ । ವಿಸ್ತೀರ್ಣ ಮಾರಣರಂಗದೊಳು ನೋಳ್ಪಗೆ ಬೀರಿ
ದಕಾರ್ತಿ ತುಕನನು ॥ ೧೯ ॥ ಉಲಿವಿನಡುವುದಂ ಸಾರ್ವ ಮೆಸೆವ ತೋ
ಳ್ಗಂಕುಳಂ| ಮುಡುವ್ರಕೊಂಡಲಾನನಂ ಬಿರು ಮಣಿಮಕುಟಂಗ| ಳಿದೆ
ಯಾಭಿಡಿಗಪ್ರಭಯ ವೀರರಗದಾದಂಡಯುಗಳಂಗಳಾಕ್ಷಣದೊಳು ॥
ಅಡಗದಾವೇಶ ಮುಬ್ಬರಿಸಮುದಪೊಡನೆಪ್ಪು| ಗೂಡದ ವಂಚನೆ ಪೊ
ಯ್ವಕೈಚಳಕಗಳ ನೋಳ್ಪ| ಪಡೆಯುಂಡ ಶಾಸ್ತ್ರಗ್ಯಮಂ ಮಾಡಿ ಪೊ
ಯ್ದಾಡಿದ ಕೈಗಳಾಹವದೊಳು ॥ ೨೦ ॥ ಇಂತು ನಾನಾಕುಶಲದೊಳು
ಗದಾಯುದ್ಧದಿಂ| ದಂತ ನಗೆಗೆಲವುಗಾಣದೆ ಮುಹಾ ವಿಷಣ್ಣವತ್ತಿ| ಚಿಂತಿ
ಸುತ ಕಲಿ ಜಲಂಧರನೊಳಂದಗ್ಗಳಿಕೆ ತಗ್ಗೆ ಭುಜಸತ್ವದಿಂದಂ ॥ ನಿಂತು
ನೀಂ ಮುಲ್ಲಗಾಳಗದೊಳೆನಗಿದಿರಾಗ| ಲಂತಾಗ ಕಾಣ ಬಹುದೆನೆ ಬಳಂ
ವಸು ನಗುತ| ತಾಂ ತಡೆಯದಾಗದೆಯನುಳಿದು ತೋಳ್ಳೊಯ್ಯುತಂ

ಪೊಡೆಯುಲಿರಗಿಂತೆಂದನು॥೨೧॥ ಪಕ್ಷಿವಾಹನವೃಥಾಮುಷ್ಟಿಯುದ್ಧ ದೊಳುಕಾ। ಲಕ್ಷೇಪವೇಕೆಬಾರೆನುತಬೊಬ್ಬಿರಿದುಕಮ। ಲಾಕ್ಷಂಗೆಕೈಗೊಟ್ಟನಸುರಪತಿದಿಗ್ಗಜಂದಿಗ್ಗಜಕೆಕೈಗೊಡುವೊಲು॥ ಕಕ್ಷಕಂಧರಭುಜದ್ವಯಪಾರ್ಶ್ವಕಟಿಮಧ್ಯ। ವಕ್ಷಸ್ಸುಜಾನುಜಂಘೋರುಗುಲ್ಫಾಂಘ್ರಿಗಳೊ। ಆಕ್ಷಣಂಪಿಡಿವಬಿಡಿಸುವಬಿನ್ನಣಂಗಳವರೀರ್ವರೊಳುಸೊಗಯಿಸಿದವು॥೨೨॥ ಸಿಕ್ಕನಂಹರಿಯೊಮ್ಮೆಯೊರ್ಮೆಖಳಪತಿಹರಿಯು। ಡೊಕ್ಕರಕ್ಕೊಳಗಪ್ಪನೊರ್ಮೆವಂಚಿಸುತಮೊಳೆ। ಪೊಕ್ಕುಹರಿಯಂಪಿಡಿವನೊಮ್ಮೆಮಿಂಚಿಹೊಳೆವಂದದಿಂ। ರಕ್ಕಸಂಜುಣುಗುವಂಪೇಳಲೇನೀರ್ವರಬ। ಲಕ್ಕೀರ್ವರುರವಣೆಗೆಯಾರ್ವರಚಮತ್ಕಾರಕೀರ್ವರೇಸಾಟಿಯೆನಲು॥೨೩॥ ಕರವಳೆಯುದಿಂದೆಬಂಧಿಸುವತಳಹತ್ತಿಬಿಂ। ದುರವಣಿಪಮಿಗೆದುವಂಗುಲದಲೊತ್ತುವಮೇಲೆ। ವರಶಿರೋವಳೆಯುದಿಂಶಿಕ್ಕಿಪರ್ತ್ತೋರಹತ್ತಿದಿತವಕದಿಂಹಿಡಿವರು॥ ಉರಗಬಂಧನದಿಂದಮೊತ್ತುವಸಘಾಟಮಾ। ಹರಿಜಲಂಧರರೊಳತಿಪಿರಿದಾಗಿಖಳನಿರದೆ। ಹರಿಯನೊಳಪೊಕ್ಕುಹಿಡಿದಂತನ್ನಭುಜಸತ್ವದಿಂದಲದನೇನೆಂಬೆನು ॥೨೪॥ ಬೀಸಿಬಿಡೆಮಾಧವಂಭೂತಳಕೆಬಿದ್ದುಮಿಗೆ। ಘಾಸಿಯಾದಂದೇಹಬಲಮುಳಿದುದುರೆಮನದ। ಮಾಸಿಪ್ಪೈಸರಮಾಯುತ್ತಿಗೆಲ್ವಾಸೆಯುಡಗಿತಾಲಸ್ಯವೆಡೆಗೊಂಡುದಾಗ॥ ಮಾಸಮಾಗ್ಯಮುರತತ್ತಿಯುಳ್ಕುತಿರ್ದ್ದುದುಪೀತ। ಮಾಸನೊಂದಾನೊಂದುಪಾಯದಿಂದಂಮುಂದ। ಪಾಸದಿಂನಾಕೆ ಜಲಂಧರನಕೊಡೆವಿನಯೊಕ್ತಿಯಿಂದಿಂತೆಂದನು ॥೨೫॥ ಮುಷ್ಟಿದೇಂದೈತ್ಯಪತಿನಿನ್ನಯುಪರಾಕ್ರಮಕೆ। ನಿಷ್ಕಟದವರವದೇಂಕೇಳೆನೆಖಳಂನಗುತೆ। ಕುಟ್ಟಿತದೆಗರುವಮಧುಕೈಟಭಾದ್ಯರಗೆಲ್ದತೆರನಲ್ಲಮಾಗನೀನು॥ ಮುಷ್ಟಿದೊಡೆಲೇಸುನಿನ್ನರಸಿಸಹಿತೆಮ್ಮನಯೊ। ಳೊಚ್ಚುತಂಬಂದುಸೆರಯುರಿಯೆನಲ್ಕೇಳ್ದುಬಳಿ। ಕಚ್ಯುತಂಖಳನಿಮಂಜಿಡುವನಲ್ಲೆಂದುನಿರ್ಧರಿಸಿದಂಮನದೊಳೆಂದು ॥೨೬॥ ಇಂತೆಂದುಕಳಿಜಲಂಧರನೆಂದವಸೂತಿಗಾ। ಕಂತುಪಿತಕಮಲೆಯಂಕೈಕೊಂಡುಖಳನರಥ। ಮಂತಡೆಯುದೇರಿದರ್ಕಮಲಾಸನೇಂದ್ರಾದಿಸಕಲಬೃಂದಾರಕರನು॥ ಸಂತೋಷದಿಂಪಿಡಿದುಕೊಂಡುಜಯದುಬ್ಬಿನಿಂ। ತಾಂತಿರುಗಿದಂತನ್ನಪಟ್ಟಣಕೆನಾನಾದಿ। ಗಂತಮಂವಾದ್ಯರವಮುಳ್ಕಿರಿಯೆನಿಖಿಳಸೇನಾತತಿಯುಗಡಣದಿಂದಂ ॥೨೭॥ ಗುಡಿತೋರಣದರಚನೆಯಿಂದೊಡನೆಕಳಶಕ। ನ್ನಡಿವಿಡಿದುಬಾಲೆಯರಸಾಲ್ಗಳಿಂದಳಮನೆಗೆ। ಸಡಗರದೊಳೈ

ತಂದು ಸಿರಿವೆರಸಿ ಹರಿಯನೊಂದರಮನೆಯೊಳಿರಿಸಿ ಬಳಿಕ ॥ ಬಿಡದೆಳ
ತಕೋಟಿರಕ್ಕಸರ ಶಾವಲನಿಕ್ಕಿ । ಜಡಜಭವ ದಿವಿಜೇಂದ್ರಮುಖ್ಯ
ಸುರರಂ ಕರದು । ನುಡಿದನೆಲ್ಲರು ಮುನ್ನ ಸೇವೆಯಂ ಮಾಡಿಕೊಂಡಿರಿ
ಯೆನಲು ಕೈಕೊಂಡರು ॥೩೮॥ ಕಮಲಜಂ ಮಂತ್ರಾಕ್ಷತೆಯನೀವನ
ಸುರಂಗೆ । ಸುಮನೋಧಿಪತಿಮುಖ್ಯ ಸಕಲಬೃಂದಾರಕರ್ । ತಮ
ತಮಗೆ ಪೇಳ್ದೊಳಿಗಂಗಳಂ ಮಾಡಿಕೊಂಡು ಬಳೆಸಚಿತ್ತವರಿದು ॥ ಕ್ರ
ಮದೊಳಿರ್ಪ್ಪರ್ಕ್ಕೈವನ ಕೈಲಾಸವೊಂದಲ್ಲ। ದಮರಾರಿಮುಕ್ಕ ಭೂಸ್ವರ್ಗ
ಪಾತಾಳಲೋಕ। ಕಮನೆಲ್ಲಮಂ ವಶಂಗೆಯ್ದು ಸಕಲೈಶ್ವರ್ಯದಿಂದೆ ಬಾ
ಳುತ್ತಿರ್ದನು ॥೩೯॥ ಇಂತು ಮೂರರ್ಬ್ಬದಬ್ದಿಂ ಸಕಲಲೋಕಮಂ।
ಚಿಂತೆಯಿಲ್ಲದೆ ಪಾಲಿಸುತ್ತಿರಲು ಸಕಲಸುರ। ಸಂತತಿಗಳತಿಚಿಂತೆಯಿಂ
ದೆ ಹರಿಯಜರೊಳೊಂಟನಗುಪ್ತದಿಂ ಯೋಚಿಸಿ॥ ಎಂತು ತಾಳ್ದಪೆವೀ
ತನಲಿಯುನಿವನೈಶ್ವರ್ಯ । ಕಂತುಮಂ ಕಾಣೆವ್ವ ಸೋರ್ಗಿ ಪೇಳ್ವೆ
ವಾ। ಕಂತುಹರಗಾತನಿಂ ಹರಿಯುದೊಡೆಮುರಣಮೇ ಮಾರ್ಗ್ಗಧನವೆ
ಮಗೆಂದರು ॥೪೦॥ ಈತೆರದೊಳಜಹರೀಂದ್ರಾದಿಗಳು ತಮ್ಮೊಳಗೆ।
ಮಾತುಡಿಕೊಂಡೊಂದು ದಿನಂ ರಾತ್ರಿಯೊಳು ಸುರ। ವ್ರಾತಮಂ ಬೆರ
ಸುರಕ್ಕಸರರಿಯದಂತತಿ ರಹಸ್ಯದಿಂದೈದೆ ಬಂದು॥ ಸಾತಿಶಯವಾದ
ಕೈಲಾಸಾದ್ರಿಯಂ ಪ್ರೊಕ್ಕು। ಭೂತನಾಥಂಗೆ ಸಾಷ್ಟಾಂಗದಿಂದೆರಗಲತಿ
ಪ್ರೀತಿಯಿಂ ಗಭವನವರಂ ನೋಡಿ ಬಂದುದೇನೆನುತ ಹರಿಯಂ ಕೇಳ್ದ
ನು॥೪೧॥ ಎಲೆ ಮಹಾದೇವ ಬಿನ್ನಪವನವಧರಿಸೋರ್ವ । ಖಳಜಲಂ
ಧರನೆಂಬವಂ ಪೆಚ್ಚಿ ಸಾವಿರ್ದ। ಸ್ತ್ರೊಳಲುಗಳ ಬಿಡದೆ ಸಾಟಿಸಿ ಸಮಸ್ತರನಿ
ರದೆ ಪಿಡಿದು ಕೊಂಡೊಯ್ದು ತನ್ನ॥ ನಿಳೆಯದೊಳು ಸೆರೆಗೈಯೆ ಬಿಟ್ಟೋ
ಡಿ ಶಿವ ಸಿಂಮ । ಬಳಿಗೆ ಬಂದೆವು ಕಾವುದೆಂದು ಬಿನ್ನವಿಸಲ್ಕ । ತಿಳಿ
ದಾ ಜಲಂಧರನ ಸಂಹರಿಪೆನಂಜಬೇಡೆಂದು ನಂಬುಗೆಯಿತ್ತನು ॥೪೨॥
ಇಂತೆಸವ ಚನ್ನಬಸವೇಶ್ವರ ಪುರಾಣಮಂ। ಸಂತಸದಿ ಬರದವ ಗೋಣೀ
ಬದಗರ್ಥವಾ । ಗ್ರಂತಮಂ ಬಿಡದೆ ಪೇಳ್ದಗೆ ಪಠಿಸಿದವಗೆ ಭಕ್ತಿ
ಯಿಂ ಕೇಳ್ದವಗೆ ॥ ಸಂತತಂ ಸಕಲಸುಖಮಂ ಸಕಲಭೋಗಮನ।
ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ । ಕಂತುಹರನಪರಾವ
ತಾರನೆನಿಸುವ ಚನ್ನಬಸವೇಶನಕ್ಕರಿಂದಂ ॥೪೩॥

ಎರಡನೆಯ ಕಾಂಡದಲ್ಲಿ ೧೪ ನೇ ಸಂಧಿ ಮುಗಿಯಿತು

೧೫ನೇ ಸಂಧಿ

ಸೂಚನೆ॥ ವರಜಲಂಧರನ ತುಳ ಗರ್ವದಿಂ ಕೈಲಾಸ । ಪುರಕೆ

ಧಾಳಿಯನಿಡೆ ಶಿವಂ ಕೇಳ್ದು ಕೋಪದಿಂ । ಧುರದೊಳಾತನ ಶಿರ
ವನರಿದವನ ಜೀವವಂ ಪಣೆಗಂಣೊಳಡಗಿಸಿದನು

ಪದ॥ ಶಕ್ರಪಂಕಜಜಾತಚಕ್ರಧರವಿನುತಪಾ। ದಾಕ್ರಾಂತಲೋಕಘನವಿಕ್ರಮಾಮ್ನಾಯವ್ಯ। ತಿಕ್ರಮಚರಿತ್ರದಕ್ಷಕ್ರತುವಿನಾಶವಿಲಯಕ್ರೋಧವರವಿನೋದ॥ ಚಕ್ರಪ್ರಜಾಭರಣಶಕ್ರಭವವರದಸ। ವ್ಯಕ್ರಲಪಾಪಾಂಗಲೀಲಾಕ್ರಮವಿಲಾಸಖಳ । ಶುಕ್ರಶಿಷ್ಯಪ್ರಳಯಶುಕ್ರಪಂಪಾವಿರೂಪಾಕ್ಷ ರಕ್ಷಿಸು ಜಗವನು॥೧॥ ರಾಮ ಕೇಳಿತ್ತಲು ಜಲಂಧರಂ ಮರುದಿನಂ। ರಾಮಣೀಯಾಸ್ಥಾನದೊಳು ಸಕಲರಾಕ್ಷಸಸ್ತೋಮವೆರಸೋಲಗದೊಳಿರುತಿರ್ದು ಕೂಡೆ ನಿರ್ಜರರಸುಳುವಂ ಕಾಣದೆ॥ ಭೀಮರೂಪಾಗಿ ದೂತರನಟ್ಟಲವರರಿದು । ತಾಮರಸನಯನಜೇಂದ್ರಾದಿಸುರರಿರುತಿರ್ಪ। ಧಾಮಂಗಳೆಲ್ಲಮಂ ಶೂನ್ಯಮೆನೆ ಕೇಳಿ ಘುಡುಘುಡಿಸಿದಂ ಖಳರಾಜನು ॥೨॥ ನಾಕನರಲೋಕಪಾತಾಳಗಗಳೊಳಿನ್ನಾಣ್ಮೆ। ಯಾ ಕಪಟದಿವಿಜರಂ ಮರೆಗೊಳಿಸಿಕೊಂಬನೆಂ। ಬಾಕೆವಾಳೆರನೋರ್ವರಂ ಕಾಣೆನಿವರೆತ್ತ ಪೋದರೆಂದಸುರಗುರುವಂ ॥ ಆಕಲಿಜಲಂಧರಂ ಬೆಸಗೊಳ್ಕೆಮುದುಳೆ । ಲೋಕನಾಯಕನಾ ಸಕಲಬ್ರಹ್ಮಾಂಡಗ। ಭರ್ಗಹರನ ಶಿವನ ಶಂಕರನ ಮರೆಪೊಕ್ಕರೆನೆ ದೈತ್ಯಪತಿಯುರಿದೆದ್ದನು॥೩॥ ಸೋಜಿಗವನಾಲಿಸಿದೆನೀಗ ನಾನಾಲೋಕ। ರಾಜಗಧಿಪತಿಯೊಬ್ಬನುಂಟೆಂಬ ಸುದ್ದಿಯುಂ । ಮಾಜುವರೆಯಾನಲ್ಲದಿಂನೊಬ್ಬಲೋಕನಾಯಕನಿಲ್ಲವೆಂದಿನ್ನೆಗಂ॥ ಆಜಿಯಂ ಮಾಣ್ದುದರ್ಗನೈಸೆ ಬರಲಖಿಳಕರಿ। ವಾಜಿರಥಭಟರೆನುತ ಸಿಂಹಪೀಠದಿಯಸುರ। ರಾಜನೆದ್ದಂ ಹರವಿರೋಧಮನುಚಿತವೆಂಬ ಗುರುವಚನಮಂ ಬಗೆಯದೆ॥೪॥ ಧಾಳಿಯಿಟ್ಟುದು ರಜತಶೈಲಕಂದಸುರಜನ। ಪಾಲಕನ ದಂಡು ತದ್ವಾರ್ತೆಯಂ ಕೇಳ್ದೊಡನೆ। ಗೂಳೆಯಂದೆಗದುದಲ್ಲಿಯ ಜನಂ ಕೈಲಾಸಶಾಗಬಹು ಬೇಗದಿಂದಂ॥ ಆಲಿಸಿದನಿವರದೂರಂ ಜಲಂಧರನೊಡನೆ। ಕಾಳಗಂ ನಮಗೆಂದು ಶಂಕರಂ ನಂಟಿಯೋ । ಳ್ವೇಳಲಾತಂ ಹರನಕಟಕದೊಳು ಪೊಯ್ಸಿದಂ ಡಂಗುರವನಾಕ್ಷಣದೊಳು॥೫॥ ಎಲೆಸಿದ್ಧ ರಾಮ ಕೇಳಾಕ್ಷಣಂ ಶಂಕರಂ। ಕಲಹಸನ್ನಹಮಂ ಕೈಕೊಂಡು ಬಲನಡೆದೊಳು ಶಿವವೇದಾವಳಿಯ ಘೋಷದಿಂ ವೃಷಪತಿಯನೇರಿ ಗಣಕುಲಮಾಗಳು॥ ಬಳಸಿಬರಲಜಸುರೇಂದ್ರಾದಿಗಳ್ತಂತಮ್ಮ। ಬಲವೆರಸಿ ಬೆಂಸೊಳ್ಳೈತರೆ ವಾದ್ಯಘೋಷಣದ। ಕಳಕಳಂ ಬ್ರಹ್ಮಾಂಡದೊಳಿಡಿಯೆ ಶಂಭು ಕೈಲಾಸಗಿರಿಯಿಂದಿಳಿದನು॥೬॥ ದಿಕ್ಕರಿಗಳಂತೈದುತಿರ್ಪಾನೆಗಳ

ಘಟಿಗೆ| ಲೆಕ್ಕವಿಲ್ಲಂಬರಕೆ ಚುಂಬಿಸುವ ಪೊಸಪೊನ್ನ | ಪೆಕ್ಕರಕ್ಕೆಯು
ಱಯಾಳಿಗಗಣನೆಯಿಲ್ಲಮುನ್ನತಮಣಿರಥಪ್ರತತಿಯು|| ಠಕ್ಕೆಗಳ್ಗವ
ಧಿಯುಮಿಲ್ಲ ಕಡುಗಲಿಪಾಯ್ದ| ಳೆಕ್ಕಕಡೆಯಿಲ್ಲಧೊರೆಧೊರೆಗಳನಿಬ
ರಪೇಳ | ಲಕ್ಕುಮೇಶಿವಶ್ರೀಪಾವಾದ್ಯನಿರ್ಘೋಷಕಜಗಜ್ಜನಂಕಿವಡಾ
ದುದು ॥೮॥ ಥಟಥರದೊಳೈದುತ್ತಿರಪ್ಪನೆಗಳ ಸೇನೆಗಳ| ಪರಿಪರಿವಪ
ಟುವರೂಥಾಳಿಗಳ ಪಾಳಿಗಳ | ಕರಧೃತಾಯುಧತತಿಯು ಕಾಲಾಳ
ಮೇಲಾಳಸಂದಣಿಯಸನ್ನಾಹದ|| ಮರುತ್ತೋಚ್ಚಲಧ್ವಜಪಟಾವಳಿ
ಯುಗಾವಳಿಯು| ಇರದೆಧಾಳಿಪಚಮರವೊತ್ತುಗಳ ಜೊತ್ತುಗಳ| ಧುರ
ಮನೈದುವಸುಭಟರುಬ್ಬುಗಳ ಕೊಬ್ಬುಗಳ ಸಂಭ್ರಮಂ ಕಣ್ಗೆಸೆದು
ದು|| ನುತಪುಂಡರೀಕವಿಲಸಿತವಾಗಿಕೊಳನಲ್ಲ| ವತುಳಪತ್ರವಿರಾಜ
ವಾಗಿಮರನಲ್ಲ| ವಿಸ್ಮೃತಸೋಮಮಂಗಳಬುಧಾನ್ವಿತಂ ತಾನಾಗಿಯಾ
ಕಾಶವಲಯಮಲ್ಲ|| ದೃತಖಡ್ಗಸಂತಾನವಾಗಿರ್ಪುಂನಾಡೆಪ | ರ್ವತ
ಮಲ್ಲ ಕೇತುರಂಜಿತನುಂಗ್ರಹಾಂತ್ಯವು | ಲ್ಲತಿಘನಸ್ಯಂದನಾನ್ವಿತ
ವಾಗಿವನವಲ್ಲವೆನಿಸಿಪಡೆನಡೆಗೊಂಡುದು ॥೯॥ ಥಾಳಿಸುವವಿವಿಧ
ಚಮರಾಳಿಯಿಂ ಪಾಳಿಯಿಂ | ಸಾಲಸೀಗುರಿಗಳೊಲೆದಾಟದಿಂ ಘಾಟ
ದಿಂ| ಕಾಳೆಗಳ ಬಿರುದನಿಗಳೆಸಕದಿಂ ಮಸಕದಿಂ ಸೂತರಪ್ರೋಗಳ್ಕೆಯಿಂ
ದಂ|| ಮೇಲಿತ್ತುದಮಳಾತಪತ್ರದಿಂ ಛತ್ರದಿಂ | ವ್ಯಾಲೋಲಖಡ್ಗಗಳ
ಥಾಳದಿಂ ಮೇಳದಿಂ | ಘೋಳಿಡುವಬಹುವಿಧದ ವಾದ್ಯದಿಂ ಚೋದ್ಯ
ದಿಂ ಪಡೆಪಡೆಪಿನಿನ್ನಡೆದುದು ॥೧೦॥ ಧರಣಿಜರಿದುದುಗಜಂಗಳ್ಕುಗ್ಗಿದ
ವು ಫಣೀ | ಶ್ವರನಪೆಡೆಗಣ್ಕಣಿಗವಾದಿಕೂರ್ಮಂ ನಸಿದು | ಸರಸಿಜಭ
ವಾಂಡಖರ್ಪರಮನುರೆಕರ್ಚಿದಂ ಬ್ರಹ್ಮಾಂಡಮಿರದೊಲೆದುದು|| ಭರ
ದೊಳುಚ್ಚಿಟ್ಟ ಕೆಂಧೂಳಿಗಳ್ಪುವಲೋಕ| ಪರಿಯಂತವೊತ್ತಿದುದು ಶಿ
ವಶಿವಾಶಿವಬಲದ| ಭರವಸವನೇನೆಂಬೆನೈಸಿದ್ಧರಾಮಕೇಳಚ್ಚರಿಯು
ನಾಕ್ಷಣದೊಳು॥೧೧॥ ಆರ್ಪುಗಳಬಹುದುಹರಸೈನ್ಯವಿಾಪರಿಯೊ
ಳೊಪ್ಪ| ಡರ್ಪಿಸಿಂದೈತರುತ್ತಿರ್ದುದತ್ತಲುಬಳಂ | ಸರ್ಪಭೂಷಣ
ನಬಲಕಿದಿರಾಗಿನಡೆತರಲ್ಕಾಣಿಸಿದವಿರ್ಬಲಗಳು ॥ ವಾರ್ಪಡೆಯು
ನೀಕ್ಷಿಸಿದಮಾತ್ರದಿಂ ಬಿಡಧಾರ್ದದರ್ಪಟುಭಟರ್ಕರಧಿಘೋಷದಿಂ ರ
ಣಕೊದಗಿ| ಬರ್ಪಚೂಣಗರಂ ಕೋಳಾಹಳಂ ಮಸಗಿತದನೇನೆಂಬೆನ
ದ್ಭುತವನು ॥೧೨॥ ಮುಂಚಿದವು ಮನಮಂಗಳದೃಷ್ಟಿ ದೃಷ್ಟಿಗ| ಳ್ಪಿಂ
ಚಿದವು ಕರದಕರವಾಳಂಗಳಾಕ್ಷಣಂ| ಮಿಂಚಿದವು ಬಾತಿಯುಬ್ಬರಿಸಿ
ದವು ಭರವಸದೊಳೈದುತಿಜಪದಚರರ್ಗೆ ॥ ಅಂಚಿತದಹಲ್ಲಣದಗಮ

ಕದಿಂಪೊಳೆಕಿದವು । ಪಂಚಧಾರಾಪ್ರೌಢವಾಜಿಗಳ್ತ್ತೆವಕದೆಪ।ಳೆಂ
ಚಿದವು ಕಾಲ್ಬೀಗದಾನೆಗಳ್ಬಲಯುಗದಚೂಣಸಂದಿಸುವಾಗಳು ॥೧೩॥
ಘೂಳೀಳ್ಟಿವಖಿಳವಾದ್ಯಂಗಳದ್ಭುತರವದೆ। ಕಾಹ್ಳೆಗಳ್ಕೂಗಿದವು ಗಜ
ಹಯರಥಧ್ವನಿಗ। ಳೇಳಿಸಿದವ್ರೋರಲ್ವನಾದ್ಯಧ್ವನಿಯುನಿನಿತುರವವುಂ
ಭಟರಹುಂಕೃತಿಗಳು॥ ಕೀಳೆನಿಸಿದವುರಣದೊಳುಭಯವೀರರುವು
ಹಾ। ಕೋಳಾಹಳದೊಳ್ಪರದೆಸೇರಿಕೂರಲಗಿನಿಂ। ತೊಳೆವೆದ್ದಿರಿದಾಡು
ತ್ತಿರ್ದರ್ ರತಿಖಾತ್ರಿಯಿಂಪೇಳಲೇನದ್ಭುತವನು ॥೧೪॥ ಮುಟ್ಟಿಮುಂದ
ಲೆಗಳಂತುಡುಕುವವಿರ್ದುಕುವರ್। ಜಟ್ಟಿಯಂತೊಳಪೊಕ್ಕುತಬ್ಬಿ
ವಕೊರ್ಬ್ಬುವರ್ ಸಿಟ್ಟಿನಿಂದಣೆದುಕ್ಕೈಯುಕ್ಕುವಸಿರ್ಕ್ಕುವಕಾರ್ಯ
ದೊಳ್ಳಾಯುಕವನು॥ ಅಟ್ಟಿರಿಪುಸುಭಟರಂಕೆಡೆಪ್ರುವರ್ದುಪ್ರುವ
ರ್। ಕುಟ್ಟಿತಲೆಗಳಗಗನಕೆತ್ತುವವರ್ತ್ತುವರ್। ನಿಟ್ಟಿಸುವಡರಿದೆನಿ
ಸಿಕಾದುವರ್ದೊಡ್ಡುವವರ್ಟುಸುಭಟರೀಬರ್ಲದೊಳು ॥೧೫॥ ಪೇ
ಳ್ವಿಡಕ್ಕರಿಯಾಯ್ತುಚೂಣಗರಕೊಳುಗುಳಂ। ತೊಳ್ವೀಯ್ಗತು
ಟವೆರಣಬೊಬ್ಬೆಗಳರಿಪುಗಳಂ। ಸೀಳ್ವಸಡಗರದಕೋಳಾಹಳದವೂ
ದಲೆಯುವಾತುಗಳಪ್ರೋಸವುಳಿಸಿನ॥ ನಿಳ್ಕಬೀಳ್ವರುಬುಪ್ರೋತ್ತುವ
ತನುಕ್ಷತಗಳಂ। ತಾಳ್ವತವಕಿಸುವತಟ್ಟುಕ್ಕಿದಸರ್ಗಳಂ। ಕೀಳ್ವಕೋ
ಳಂಕೊಂಬಸಂಭ್ರಮವನಿರದೆಪಡೆಯುರದೀಕ್ಷಿಸುತ್ತಿರ್ದುದು ॥೧೬॥
ಇತ್ತಂಡಗೋಳ್ಪೂಣಪ್ರೋಯ್ದಾಡಿವುಡಿಯೆಸಂ। ವರ್ತ್ತಸಾಗರದಂತೆ
ಕರಿತುರಗರಥಪಟುಭ। ಟತ್ತಡೆಯುದೆರಡುಬಲದಿಂದೆನೂಂಕಿದರ
ತುಳಕೋಲಾಹಲದರಭಸದಿಂ॥ ಆತ್ತಡೆಯುಬಸುದೆಂಬಪೇರ್ಮ
ಯುಂತಾಗಿದವು। ತೇರ್ತ್ತೇರೊಳೆಕ್ಕವುಕ್ವದೊಳಾನೆಯಾನೆಯೊ। ಳ್ಥೂ
ರ್ತ್ತಕ್ವಿಗಂಭಟಭರ್ಟರೊಡನೆಸೆಣಸಿದರಾನ್ನಾಪ್ರಕಾರದಿಂದಂ॥೧೭॥
ತಿವಿದರೊತ್ತರಿಸಿದನೂರ್ಂಕಿದರ್ತಾಂಕಿದರ್। ಕವಿದರಿಟ್ಟಣಿಸಿದವುರ್
ತ್ತಿದಕರ್ತ್ತಿದರ್। ಜವದೊಳಿರಿದಿರಿದಾಡಿವುಗ್ಗಿದತ್ತಗ್ಗಿದಸರ್ಂಗರಾ
ವೇಶದಿಂದಂ॥ ಅವಗಡಿಸಿಹೊಕ್ಕುಸ್ರೋಯ್ದಾಡಿದ್ರೋಡಿದರ್। ನವರುಧಿ
ರಧಾರೆಯೊಳ್ಮುಳುಕಿದಪೂರ್ಳಕಿದರ್। ತವಕದಿಂತಲೆಗಳಂಕುಟ್ಟಿದ
ಮೆಟ್ಟಿದಬಿರ್ದ್ದಟ್ಟಿಗಳಹಿಂಡನು॥೧೮॥ ಮುರಿವುದಸುರರಸೇನೆಯೊ
ಮೆರ್ದವಿಜರದಳಂ। ಪೆರೆತೆಗವುದೊಮೆರ್ಪಡುಬಲಿಸಿನೂಂಕುವ
ದೊರ್ಕ್ಕೆ। ಪೊರೆಗೈವಸುರಬಲಂಬೆನ್ನೀವುದಮರಾರಿಗಳಸೈನಿಕಂಭ
ರದೊಳು॥ ಇರಿತಮುರಿತದೊಳಿಂತುಪೇರ್ಬಲದಸುಭಟರೊ। ಳ್ಕು
ರಿದರಿಯಖಂಡಗಳತುಂಡಗಳಮುಂಡಗಳ। ಮುರಿಮೂಳೆವಿಂಡುಗಳ

ಪೊಸಬಗೆಯಚೆಂಡುಗಳೆಶಾಕುಳೆಂಕಂಗೆಸೆದುದು||೧೯||ಮತ್ತೆ ಸೊಂಕುತಹರಿಯಜೇಂದ್ರಾದಿದಿಕ್ಪಾಲ| ರೊತ್ತರಿಸಿಸಕಲಸನ್ನಾಹದಿಂದೈತ್ಯರಂ|ಕತ್ತರಿಸಿಕಡಿದಿರಿದುತರಿದುಬರುತಿರಲಂದುದನುಜರತಿಭೀತಿಯಿಂದಂ||ನಿತ್ತರಿಸಿನಿಲಲಾರದೋಡುತಿರೆಸುರರುಬೆಂ | ಬತ್ತಿಖೋಯೆಂದಾದುರ್ಗಸಂಚರಿಸುತಿರಲುಪುರ| ರೊತ್ತಾಯದಿಂದೆಧೊರೆಧೊರೆಗೆಳೇವುಂಕೊಂಡುನಡೆದರತಿಖಾತಿಯಿಂದಂ||೨೦|| ಪಾವುನವಿರೂಪಾಕ್ಷಜಂಭಗಜಶಿರಖಡ್ಗ ರೋಮವಿದ್ರಾವಣನಿಶುಂಭತಾರಕಕಾಲ|ನೇಮಿಜರ್ಜರಶಂಖುಶಿರವಜ್ರನಾಭಖುರಮುರಶುಂಭರಾದಿಯಾದ|| ಭೀಮರಾದಸುರನಾಯಕರೆಬರೆನೋಡಿಸು| ತ್ರಾಮುಹರಿಯಜಮುಖ್ಯಸುರರೋಡುತಿರೆಕಂಡು | ಕಾಮಹರನಿರದೊಡೆನೆಹರಗಣಕೆಶಲವಿಕ್ಷೆವುಂಕೊಂಡರಾಕ್ಷಣದೊಳು||೨೧||ವರನಂದಿಮಾಕಾಳಕಾಲಹರಕಂಕಾಳ|ಧರಸೂರ್ಯ್ಯಪಾತರೇಣುಕಭೃಂಗವಾದಿಗ|ಳ್ಗರದಕಾಮುರ್ಗಕದಟಂಕಾರದಿಂಮೂಜಗಂತಲ್ಲಣಿಸೆಕೋಪದಿಂದ|| ಸರಳ್ಗಳೆಕರಮುತ್ತೈತರೆದಾನವರಬಲದ| ನೆರದದೊಟ್ಟಗರಾನಲರಿಯದೋಡಲ್ಕಂಡು| ದುರುಳಬಲಶುಂಭಧೂಮ್ರಾಕ್ಷವೃತ್ರಾದಿಗಳ್ಕೈಕೊಂಡರಾಹವವನು||೨೨|| ಜಂಭನಂತಡದುಗ್ರನೆಟ್ಟಂವೃಷೇಶ್ವರಂ|ಶುಂಭನಂತೊಡೆಕಿದಂಭೃಂಗವಕೇಳ್ದನಿ| ಶುಂಭನಂತಾಗಿದಂವೃತ್ರಂಗೆದಂಡಧರನಿದಿರಾಗಿಕೋಲ್ಗರೆದನು || ಕುಂಭಂಗೆಮಾರಾಂತುಕಾಲಹರನೆಚ್ಚನ್ನಿಕುಂಭನಂಕಂಕಾಳಧರನೈದೆಸೆಣಸಿದಂ | ಶುಂಭನಂದೀಶಗಕ್ಕಾಳಗಂಬಲಿದುದದನೇನೆಂಬೆನದ್ಭುತವನು ||೨೩|| ಆನುಜಂದಲ್ಲಿಸಮರಾಂಗವಿಬೇರಳಿಂದೆ| ಸೇದುವಂಬಿನಕಣ್ಣಕಿಡಿಯಗರ್ಜಿತ್ರಿಂಜ ನಾದದಸಪೊಟಕೆಯಘೋರರಬಗ್ಗಭ್ರುಕುಟಿಮುಖದಲುಪ್ಪಶ್ವಾಸದ || ಸ್ವೇದಬಿಂದುಪ್ರತಾನಾನ್ವಿತಾಂಗದರಣಾ| ವೋದಜೆತ್ತದಕರಚಮತ್ಕೃತಿಯವಿಜಯುಸಂ|ಪಾದಿಗಳ್ಕಂದಿಶುಂಭಾಸುರಧುರರದೊಳೆಚ್ಚಾಡಿದಗಾಢದಿಂದಂ||೨೪||ಶರಕೆಶರಮುಧಟಗಧಟುವೇಶಕಾವೇಶ | ಮುರದೆಘೊಯಕೆಘೋಯಮುಗ್ಗಳಿಕೆಗಗ್ಗಳಿಕೆ | ಕರಚಮತ್ಕಾರಕೆಚಮತ್ಕಾರಮಾರ್ಭಟೆಗೆಮಾರ್ಭಟೆತುಳಿಲ್ಗೆತುಳಿಲು||ಭರಕೆಭರಮೊಡನೆಮೂದಲೆಗೆಮೂದಲೆಗಳುಂ | ಸರಿಯಾಗೆಸುರೇಶಶುಂಭಾಸುರಪ್ಪಾ|ಧುರದೊಳೆಚ್ಚಾಡಿದರ್ಕೈಗುಂದದಾಕ್ಷಣಂಪೇಳಲೇನಚ್ಚರಿಯನು||೨೫||ಎಸುವರೆಚ್ಚಂಬುಗಳನೋರೋರ್ವರಿರದೆಖಂಡಿಸುವರೊಡನೆಸುವರ್ಕೈದುವಸರಳಸಾಗಭೀ | ದಿಸುವರಾವೇಶದಿಂಕೂಗುವರ್ಮಿಗುವರ್ಕಣೆಕಣೆಯ

ಸೋಂಕಿನಿಂದಂ॥ ಪೊಸಗಿಚ್ಚೊಬ್ಬಿರಿವರಿರಿದೊತ್ತುವಗ್ಗಿಲ್ಗಳಿಂ, ಕೆಸು
ರಿದರಿವರ್ಕ್ಕುಬುಚೆನು ತತ್ತರಿಕೊಂದುಕಟ್ಟೆಸಕದಿಂ ಪೊಸಬಿಲ್ಲನಾನುಹ
ರೊತ್ತುವರಂಬುಗಳನವರಾಹವದೊಳು ॥೬॥ ಕಡಿವಕಣೆಗಳಿಗಡೆ
ಯುಲ್ಲಗಗನಾಂಗಣದೊ। ಳಿಡಿದಂಬುಗಳ್ನಿತಿಯುಲ್ಲಭಟರವಯವಮ।
ನುಡಿದಶರತತಿಗವಧಿಯುಲ್ಲವಾರಾಂತರಿಪ್ರಗಳೆಲಲುಟವಳಿಪಿಯನು॥
ತೀಡಿದಪಬಾಣಕ್ಕೆಲಕ್ಕವಿಲ್ಲೆಂದಿಗಂತದೊ। ಳ್ತಿಡಿವಇಷುಚಯಕೆಸವ
ಣ್ಣಲ್ಲಪಾತಾಳಕ್ಕೆ। ನಡೆವಶರಕಂತವಿಲ್ಲೆನೆ ಬಾಣನುಯುಪಾಯ್ತು
ಪುಳಜಗಂನಿಮಿಷದೊಳಗೆ॥೭॥ ರವಿಗೆಸೋಭಾನಪುಷ್ಕರಕೆತಾ
ರಂಬಿನೀ। ನಿವಹನುಬ್ಬಿಗೆಸೇತುಪಾತಾಳಕಂಗರುಡ। ಮುವನಿರುಗ
ತತಿಗೆಪೊಸಪೊದರೊಪ್ಪುವಗ್ರಿಸಂಕುಲಕೆಘನತತರದವಪ್ರಂ॥ ಭುವಿಗಂ
ಧಕಾರವಾಹವದೊಳಗೆಸೆಣಸುತಿರೆ। ವಿವಿಧಸುಭಟವೆನ್ಯಗೆಜೋ
ಡೆನಿಸಿಸ. ತ್ತಲುಂಕವಿದವಿಸುಭಟರಬಾಣಂಗಳೆಲ್ಲಗಂತದೊಳು
ಚೋರ್ಗ್ವಿಸಿಂದಂ॥೮॥ ಎಸಿಸಿದ್ಗುರವಮುಕೇಳ್ಗೆ ಭನಂದೇಶಗೆ। ಕಲ
ಹದಾವೇಶವುಬ್ಬರಿಸಿಕರಕರಿತನುಂ; ಡಳಿತಕಾರ್ಮುಕದೊಬ್ಬರೊ
ಬ್ಬರಂಜಯಸುಭಿಲಾಷೆಯಿಂಕೂರ್ಗಣೆಗಳಿಂ ॥ ಬಿಳಿಸವಿಸಿಬೀರುವಂ
ಬ್ಯಕ್ಕೆನಾಬಾಣವುಂ। ಸೆಳಸವರಿಬಿಸುಡುವಂನೃಪನವಸುದಂನುತ್ತ
ಚೊಳೆಸಹೊಂಬರಸದಂಬುಗಳಿಂದೆಸೆಯೆ ಕಡುನೃಪರುಜಸಾಕ್ಷಣ
ದೊಳು॥೯॥ ಚಾಪವಂಕಡಿದನುಡಿಪಂತೇರನುಸಯು। ಕೂಪನಂ
ಛತ್ರಿಸಿದನಾಸೂತನಂತರಿದು। ಕೋಪನಂತಾಳ್ದುಸೀಗುರಿಛತ್ರಚಾ
ಮರಪತಾಕೆಗಳನಡಗಡಿದನು॥ ತಾಪನಂಶೋಭಿಸಂದೆಂಬನೊಳು
ತಗ್ರಣಾ ಟೋಪನಂನೋಡಿವಿಸ್ಮಿತನಾಗಿದಾನವಂ। ವಾಪವುಂಭಾ
ವಿಸದೆಕಟ್ಟುವುರಿದೋಡಿದಂಭೀತಿಯಿಂದೇನೆಂಬೆನು॥೧೦॥ ಪೇಳ
ಲೇನಟ್ಟಿಯುನಿಂತುಭಯುನಾಯಕಗ। ತಾಳಗದೊಳಿಚ್ಚಾಡವೃಷ
ಭಪಟುಭಟನ। ಕೋಳಾಹಳವನಾಂತುಸೈರಿಸದೆವುರಿದರೊಂ
ದೇಬಾರಿಥೊರೆಥೊರೆಗಳು॥ ಭಾಳಲೋಚನನಭಟರಿರದೆಬೆಂಬತ್ತಿದ
ರ್ । ತೋಳದಿಂದಾಕರ್ಣಪರಿಯಂತಸೇದಿದಕರಾಳಸ್ಫುಲಿಂಗಸಂಗತ
ಬಾಣನಿಚಯದಿಂದೇನೆಂಬೆನಾಹವವನು॥೧೧॥ ತೋಳ್ಗಳಂಕಂಡು
ಕಟ್ಟೋಡುವಿಗಕುರಿಯ। ಜಾಲಪ್ರೋಕ್ಷಿಪಶಿದಾಪಸಿರುವುಂಬರಿವ
ಶಾ। ರ್ಥ್ವಿಲಂಗಳಂತಾಣುತಳವಳಿದುಪೋಪವೃಗನಿಚಯಪ್ರೋಪೇಳೆ
ನಲ್ಕೆ॥ ಚಾಳಿದಕ್ಕಸರೋಡಿಪೋಗಿಬಳಿನಿಹನೆಲೆಯ। ನೋಲಬೀಳಲ್ಕಂ
ಜುಕಲಿಜಲಂಧರನತಿಕ। ರಾಳಬದ್ಧಭ್ರುಕುಟಿವುಬುನಾಗಿನಡೆದನ

ನುಡಿಯೆ। ಸೃಷ್ಟಿದಾನಂದಸ್ವರೂಪನಿನ್ನೊಳುಗರ್ವದಿಂ ಕಾದಿದೆ ನಿನ್ನೊಡಲನು॥ ಬಿಟ್ಟುಬಿಸುಟೀಗಳೆನ್ನಾತ್ಮವಂ ನಿನ್ನೊಳಗೆ॥ ಬೆಚ್ಚುಕೊಳ್ಳೆಂದುದನುಜೇಶ್ವರಂ ಬಿನ್ನವಿಸೆ। ಲಟ್ಟರಿಯೊಳಭವನಾತಂಗೆ ಸಾಯುಜ್ಯಮಂ ಪಾಲಿಸಲ್ಕನುವಾದನು ॥೩೯॥ ಕರುಣದೊಳೆ ಪಾದದುಂಗುಷ್ಟದಿಂ ಚಕ್ರಮಂ। ಬರೆದು ನಯನತ್ರಯದೊಳೀಕ್ಷಿಸಲ್ಕದಾಗ, ತರಣಿಚಂದ್ರವೈರ್ಶಳಿಗಳಗ್ನಿಯೇವಟ್ಟಯಾಯಾತ್ತು ಚಕ್ರಮಂ ರುದ್ರನು ॥ ಕರದೊಳಗೆ ಪಿಡಿದಾ ಜಲಂಧರನ ಕಂಧರದ। ಸರಿಸಕಿಡಲುರಿದುರುಜ್ವಲಿಸುವಾತ್ಮಜ್ಯೋತಿ। ಬೆರಸಿದುದು ಹರನಪಣೆಗಂಣಪಾವಕನೊಡನೆ ಪೇಳಲೇನಚ್ಚರಿಯನು ॥೪೦॥ ಸುರಿದುದೀಶ್ವರನ ಮಂಡೆಯ ಮೇಲನವಕುಸುಮ। ವರುಷಮಾಗಳ್ದೇವದುಂದುಭಿಗಳುಂ ಮೊಳಗೆ। ಹರಿಯಜೇಂದ್ರಾದಿವೃಂದಾರಕರು ಶಂಕರನಪದಕೆರಗಿ ಭಕ್ತಿಯಿಂದಂ॥ ಪರಮಶ್ರುತಿಮಂತ್ರದಿಂ ಕೊಂಡಾಡೆ ಸೆರೆಗಳಿಂ। ಪರಿಹರಿಸಿ ರಕ್ಷಿಸಿದೆಯೆಮ್ಮನೆಲೆ ಕಾರುಣ್ಯಶರಧಿ ನೀನೆನುತ ಪ್ರಾರ್ಥಿಸಿ ಪೊಗಳುತಿರ್ದುದು ಸುರವ್ರಾತಂ ಭಕ್ತಿಯಿಂದಂ ॥೪೧॥ ಕೊಂಡಾಡುವ ಹರೀಂದ್ರಾದಿಸುರನಿಕರಮಂ। ಕಂಡು ಕಾರುಣ್ಯದಿಂ ಸಂತೈಸಿ ಸುರಮುಕುಟ। ಮಂಡಿತಪದಾಬ್ಜನವರವರಲೋಕಂಗಳಿಗೆ ಬೀಳ್ಕೊಟ್ಟು ಲೀಲೆಯಿಂದಂ॥ ತಂಡತಂಡದ ಗಣಂಗಳ್ವೆರಸಿ ಬಂದು ಗಿರಿ। ಮಂಡನವೆನಿಪ್ಪ ಕೈಲಾಸಗಿರಿಯಗ್ರದುಟ್ಟಂಡರಾಜಾಲಯದೊಳೊಪ್ಪಿದಂ ಪಂಪಾವಿರೂಪಾಕ್ಷನಲ್ತಿಯಿಂದಂ॥೪೨॥ ಇಂತೆಸವ ಚೆನ್ನಬಸವೇಶ್ವರಪುರಾಣಮಂ। ಸಂತಸದಿ ಬರೆದವರ್ಗೋದಿದರ್ಗರ್ಥವಾ। ಗ್ರಂಥಮಂ ಬಿಡದೆ ಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸುಖಮಂ ಸಕಲಭೋಗಮನ। ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ। ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದಂ ... ॥೪೩॥

೨ನೇಕಾಂಡದಲ್ಲಿ ೧೬ನೇಸಂಧಿ ಮುಗಿದುದು.

## ೧೭ನೇಸಂಧಿ

ಸೂಚನೆ॥ ಪರಶಿವನಕೂರ್ತುಹರಿತಪದೊಳಿರಲಾಗಳೆಂ। ಕರ
ನೊಲಿದು ಚಕ್ರಮಂ ಕೊಟ್ಟನಾ ಕಥೆಯನಾ। ದರದಿಂದೆ ಕೇಳೆಂ
ದು ಸಿದ್ಧರಾಮಂಗೊಲಿದು ಚೆನ್ನಬಸವಂ ಪೇಳ್ದನು॥

ಪದ॥ ಅಷ್ಟಾಂಗಯೋಗಸಂಘಟ್ಟಶುಕಶೌನಕವಸಿಷ್ಠಾದ್ಯಖಿಳಮುನಿಶ್ರೇಷ್ಠಸಮುದಯಮನೋ। ಭೀಷ್ಟನಾಯಕ ಸುರಜ್ಯೇಷ್ಠಮುಖಸ್ರುಮನಸಾಧಿಷ್ಠಿತಪದಾಬ್ಜಯುಗಳೆ॥ ದುಷ್ಟವಾರಣದನುಜದಿಷ್ಟಹೇ

ನಾಸುರೋ । ತೃಪ್ತಜೇನಾನಿಲಾಕೃಷ್ಟಭೋಜಗಕೃಪಾ । ದೃಷ್ಟಿ
ಯಿಂನೋಡಿಸಂತುಷ್ಟಿಬಡಿಸೆನ್ನಗಿರಿಜೋಷ್ಠಚುಂಬನವಿಲಾಸ॥೧॥ ಆ
ಓಸ್ಸೈಸಿದ್ಧರಾಮೇಶಕಲಕಾಲದಿಂ। ಮೋಕ್ಷಲಕ್ಷ್ಮೀವರಂ ತಜ್ಞಕ್ರಮಂ
ಕುತರ್ಕ। ಭಾಳಾಕ್ಷನಂಮೆಚ್ಚಿಸುವೆನೆಂದುತೊಡಗಿದಂತಪವನತಿನಿ
ಷ್ಠೆಯಿಂದಂ॥ ಪೇಳಲೇನುಗ್ರತರತಪಕೊಲ್ದುಶಂಕರಂ। ಲೀಲೆಯಿಂದೈ
ತಂದುಮೆಚ್ಚಿದೆಂವರವದೇಂ। ಕೇಳೆಂಜಬೇಡನೆನಲಚ್ಯುತಂಕಂದೆರ
ದುನಮಿಸಿಬಳಿಕಿಂತೆಂದನು ॥೨। ಎಲೆಮಹಾದೇವನಿನ್ನಾಜ್ಞೆಯಿಂ
ಲೋಕಮಂ। ಸಲಹುತಿರಲೊಬ್ಬೊಬ್ಬಖಳರುದಿಸಿಲೋಕಮಂ। ಕೊ
ಲುತಿರ್ಪರಿದಕೆನಾನೇಗುವೆಂತವಕರದಚಕ್ರಮಂಪಾಲಿಸಿದೊಡೆ॥ ತ
ಲೆಯನರೆವೆಂದುಷ್ಟರಾದವರಸೆಂದೆನಲು । ಜಲಜನಾಭಂಗೆಚಕ್ರವ
ನಿತ್ತುತನ್ನನಿಜ । ನಿಳಯಕೈದಿದನಭವನತ್ತಲಾವಿಷ್ಣುನಿಜಲೋ
ಕದೊಳುಸುಖಮಿರ್ದನು ॥೩॥ ಪರಶಿವನಕರುಣದಿಂಚಕ್ರಮಂಪ
ಡೆದುಮುರ । ಹರನಖಿಳಲೋಕಮಂರಕ್ಷಿಸುತದುಷ್ಟರುಮ । ನಿರ
ದೆಸಿಕ್ಷಿಸುತಿರಲುಕೆಲಕಾಲದಿಂಮೇಲೆಕ್ಷುಪನೆಂಬಹರಭಕ್ತನು ॥ ವ
ರಮುನಿದಧೀಚಿಯೊಳುನೆತ್ತಮಾಡುತ್ತೆನೀಂ । ಹರಿಭಕ್ತನಾಗುಸೊ
ಲ್ತೊಡೆಮುನಿಪನಾಂಸೋಲೆ । ಹರಭಕ್ತನಾದಪೇಂಕೇಳೆಂದುನುಡಿ
ದಾಡೆಸೋಲ್ತನಾಕ್ಷುಪಭೂಪನು ॥೪॥ ಇಂತುನೀಂಮೂರುಸೊ
ಳೋಳ್ಸೋಲ್ತುಬಳಿಕೀಗ । ಇಂತುಹರಭಕ್ತನಾಗೆನಲುಮಂನೊಂಕಿಸ।
ಲ್ತಾಂತಪದೊಳೀಶನಿಂವಜ್ರಕಾಯವಪಡೆದುಬಂದರಸನೊಡನೆಕಾ
ದಿ॥ ಮುಂತೆಕವಿವವನಚತುರಂಗಮಂಮುರ್ದಿಸಿಲ । ಯಾಂತಕನ
ಮುಳಿಸಿನಿಂಪಾತಸಂಬೆನ್ನಟ್ಟಿ । ಇಂತುಪಿತನಾತನಂಮುರೆಪ್ರೋಗಿಸಿ
ಕೊಂಡುಮುನಿಯೊಡನೆಯುದ್ಧಂಗೆಯ್ದನು ॥೫॥ ಪಲವಾಯುಧಂ
ಗಳಿಂಕಾದಿಹರಿಮುನಿಪನಂ । ಗೆಲಲರಿಯದೆಸವಚಕ್ರವ ನಿಡಲು
ಮುನಿಪಾಣ। ತಳದಿನಾಚಕ್ರಮಂಪಿಡಿದೊರಸಿಚೂರ್ಣೀಕೃತಂಮಾ
ಡಿಬೆಂಬತ್ತಲು ॥ ನಿಲಲಂಜಿಹರಿತಲೆಯಕೆದರಿಕೊಂಡೋಡಲಾ । ನ
ಳಿನಾಕ್ಷನಂಕ್ಷುಪಂಕಂಡುಶಿವಭಕ್ತರೇ । ಬಲುಹರಾಎನುತಲಾಮು
ನಿಪಾಲನಿಂದೆಶಿವದೀಕ್ಷೆಯಂತಾಂತಳೆದನು॥೬॥ ಪ್ರತಿದಿನಂಸಾಹಸ್ರ
ಕಮಲಂಗಳಿಂದುಮಾ । ಪತಿಯನರ್ಚಿಸಲೊಂದಿನಂಶಿವಂತನ್ನನದ।
ಧೃತಿಯನೀಕ್ಷಿಸಲೆಂದುಸಾವಿರದೊಳೊಂದು ಪಂಕೇಜಗಳರಂಕುಂದಿ
ಸೆ॥ ಅತಿಶಯಸುಭಕ್ತಿಯಿಂತನ್ನಬಲಗಂಣನಂ । ದತುಳಲಿಂಗಕೆಸಮ
ರ್ಪಿಸೆಮೆಚ್ಚಿಪಾರ್ವತೀ। ಪತಿಪುನಶ್ಚಕ್ರಮಂಕೊಟ್ಟುಕಮಲಾಕ್ಷನೊ

ಡೆನಿಂತೆಂದನಾಕ್ಷಣದೊಳು ||೭|| ಮದನಪಿತಕೇಳಾದೊಡೆನ್ನ ಭಕ್ತ ಪ್ರಪದ | ಹೃದಯದೊಳಗಿರ್ಪನನವರತವಾಭಕ್ತರೇ| ಸದಮಲಪ್ರಾಣವೆನಗೆನ್ನ ಮುದ್ರಾಂಕಿತರಮೋಲೊರ್ವ್ವಯುಂ ಚಕ್ರವುಂ|| ವಿದಿತಪ್ರಯೋಗಿಸದಿರೆಂದು ನೇಮಿಸಿಕಿವಂ| ಮುದದೊಳಾವಿಷ್ಣುವಂ ಬೀಳ್ಕೊಟ್ಟು ಕೈಲಾಸ | ಸದನಮಂ ಪೊಕ್ಕು ಗಿರಿಜಾತೆಯೊಡಗೂಡಿ ಸುಖಿಮಿರ್ದನಂ ವಿರೂಪಾಕ್ಷನು ||೮|| ಇದು ಸಕಲವೀರಮಾಹೇಶ್ವರರಸದ್ವಿಮಲ| ಹೃದಯಾಬ್ಜಮಿತ್ರನು ಷಟ್‌ಸ್ಥಲಬ್ರಹ್ಮವೆಂ | ಬುದಧಿವರ್ದನಸೋಮನೆನಿಪ ಗುರುಸಿದ್ಧವೀರೇಶ್ವರನಕರಜಾತನು|| ಸದಮಲಜ್ಞಾನಿಸಕಲಾಗಮಪುರಾಣಕೋವಿದನೆನಿಪ ವಿರೂಪಾಕ್ಷಪಂಡಿತಾರಾಧ್ಯನತಿ| ಮುದದಿಪೇಳ್ದೀ ಚನ್ನಬಸವಪುರಾಣಸತ್ಕಥೆಯೊಳೆರಡನೆಯ ಕಾಂಡಂ ||೯|| ಇಂತೆಸವ ಚನ್ನಬಸವೇಶ್ವರಪುರಾಣಮಂ| ಸಂತಸದಿ ಬರದವರ್ಗೋದಿದರ್ಗರ್ಥಸಾದ್ಯಂತಮಂ ಬಿಡದೆಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗ|| ಸಂತತಂ ಸಕಲಸುಖಮಂ ಸಕಲಭೋಗಮುಮ| ಸಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ| ಕಂತುಹರನಪರಾವತಾರನೆನಿಸುವ ಚನ್ನಬಸವೇಶನಕ್ಕರಿಂದಂ ... ... ||೧೦||

---

ಎರಡನೆಯ ಕಾಂಡ ಸಂಪೂರ್ಣವಾಯಿತು.

ಅಂತು ಕಾಂಡ ೨ಕ್ಕೆ ಸಂಧಿ ೨೩ಕ್ಕೆ ಪದ ೧೦೧೮ಕ್ಕೆ

ಮಂಗಳಂ.



ಶ್ರೀರಸ್ತು.

## ಚನ್ನಬಸವೇಶ್ವರಪುರಾಣವು.

### ಮೂರನೆಯಕಾಂಡ—೧ನೇಸಂಧಿ.

ಸೂಚನೆ॥ ಪಿರಿದೆನಿಪಗಸ್ತ್ಯಮುನಿಶಾಪದಿಂಗಂಧರ್ವ | ನುರು
ಗಜಾಸುರನಾಗಿ ಹರಿಯಜೇಂದ್ರಾದ್ಯರಂ, ಧುರದೊಳೋಡಿಸಲು
ಭವನಾಗಜಾಸುರನಸಂಹರಿಸಿದಂ ಲೀಲೆಯಿಂದಂ॥

ಪದ॥ ಸರಸಗುಣಧಾಮನಂ ಸೋಮನಂ ಭೀಮನಂ | ಕರಧೃತತ್ರಿ
ಶೂಲನಂ ಲೀಲನಂ ಪಾಲನಂ| ಕರಿಚರ್ಮಧಾರನಂ ಧೀರನಂ ವೀರನಂ ಶೂರ
ನಂ ಜಿತಮಾರನಂ॥ ಸುರಶೈಲಚಾಪನಂ ಗೋಪನಂ ಶ್ರೀಪನಂ| ನಿರುತ
ಸುರಕಾಂತನಂ ಕಾಂತನಂ ಶಾಂತನಂ | ದುರಿತಹರದಕ್ಷನಂ ರಕ್ಷನಂ ವರ
ವಿರೂಪಾಕ್ಷನಂ ನುತಿಗೆಯ್ವೆನು॥೧॥ ಆಲಿಸಿನ್ನೆಲೆ ರಾಮ ಪೂರ್ವದೊಳ
ಗಸ್ತ್ಯಮುನಿಪಾಲಕಂ ಕಾವೇರಿಯಾದಿಯೊಳ್ತಪಿಸುತ್ತೆ | ಲೀಲೆಯಿಂ
ದಿರಲೋರ್ವಗಂಧರ್ವನಾಗಸದೊಳೊಪ್ಪುವವಿಮಾನದೊಳಗೆ ॥ ಮೇಳೈ
ಸಿಂದೈದುತ್ತೆ ಮುನಿಪನಂ ಕಂಡುಹಾ | ಸ್ಯಾಲಾಪದಿಂ ಸತಿಯಮುಡಿ
ಯಪುಷ್ಪವಿಂದಿಡಲು | ಮೇಲನೀಕ್ಷಿಸಿ ಮುನೀಶಂ ಕೆರಳ್ದೆತ್ತಿದಕರಾಗ್ರ
ದಿಂತಿಂತೆಂದನು॥೨॥ ಮತ್ತತ್ವದಿಂದೆನ್ನನಿಟ್ಟೆಲಾ ನೀಂ ಮದೋ | ನ್ಮ
ತ್ತತೆಯನುಳ್ಳದ್ಭುತಾಕೃತಿಯನಾನಾಜ | ಗತ್ತ್ರಗಳನೈದೆ ಸಂಹರಿಪ
ದುರ್ಗಜವಾಗಿ ಜನಿಸೆನುತ ಶಾಪವೀಯೆ॥ ಚಿತ್ತದುಮ್ಮಳದಿಂದೆ ಋು
ಷಿಯಡಿಗೆ ಮಣಿದು ಮುನಿ | ಸ್ತೋತ್ರಮನೆ ಶಾಪಮಂ ಮಾಣಿಸೆನೆ ನೀ
ನಿಂತಿ | ರುತ್ತಾರ್ಗೆಯುಂ ಸಾಧ್ಯಮಲ್ಲದಿರು ಶಿವನಿಂದೆ ಮುಕ್ತನಹೆ ಪೋ
ಗೆಂದನು॥ ಬಡವನೀ ಮುನಿಶಾಪವೆತ್ತ ಮಾತ್ರದೊಳಾಗಳೆಡಗಿ ತೀರಿ
ದವಿಮಾನಂ ಸಮೀಪದೊಳಿರ್ದ| ಮಡದಿಯೊಸಾದಳೋ ಶಿವಶಿವಾ ಮ
ಸಾದ್ಭುತಾಕೃತಿಯ ಗಜರೂಪಕನವನು॥ ಪಡೆದನಾಕ್ಷಣದೊಳಾತನ
ಕಾಳರೂಪವಾ| ದೊಡಲಪೇರ್ಮೆಯನದೆಂತೆಂತೆಂದು ನಿಶ್ಚೈಸಿ| ನುಡಿ
ಯುಲಳವೇ ಭಗಣಪಂತಿಯುರಿಗಟ್ಟಿಯೋಲ್ಕಂಗಸೆದವೇನಂಬೆನು ॥೪॥
ಪುಷ್ಕರವನರೆನೀಡಿ ಬರೆತೆಗೆಯೆ ಸಾಗರಚ | ತುಷ್ಕಜಲಮುಂ ಸುರ್ರ
ನೇರುವುದು ಹಸ್ತಮಂ| ಪುಷ್ಕರಕ್ಕೆತ್ತಿಯುಸುರಂ ಬಿಡಲು ಬೊಮ್ಮಾ
ಸನಾಂಬುಜಂ ಕಂಪಿಸುವುದು॥ ಪುಷ್ಕರಾಪ್ತೇಂದುಬಿಂಬಂಗಳುಂ ತದ್ಗ
ಜದ | ನಿಷ್ಕಳಂಕಿನ ಘಂಟೆಯಾದವೆಡೆಯಾಟದಿಂ| ಪುಷ್ಕರಭವಾಂ
ಡವೊಲೆದಾಡುತಿರ್ದುದು ಪೇಳಲೇನದ ವಿಸ್ಮಯವನು ॥೫॥ ಪಾದಂ

ಗಳೆವನಿಮಂಡಲಕೆ ಬಹುದುಸ್ಸಹಂ। ಪಾದಂಗಳುತ್ಕ್ಷೇಪ್ಯಂಹಿತನಾದವು
ಮುರಪ್ರಮಾದಮುನ್ನತಕರಂಭೀಕರಂದಂತಂಗಳುಂಲೋಕಕಂತಂಗ
ಳು ॥ ಆದವಾ ಪುಷ್ಕರಂದುಷ್ಕರಂಮಿಗೆದೊಡ್ಡಿ । ತಾದಕುಂಭಸ್ಥಳಂ
ಪರ್ವತೋಪಮವೆನ । ಲ್ಕಾದುಷ್ಟಗಜದದ್ಭುತಾಕೃತಿಯುಬಣ್ಣಿಸು
ವೊಡಹಿಪತಿಗೆಸಾಧ್ಯಮಲ್ತು ॥೬॥ ಕೊಳದಂತೆ ಪುಷ್ಕರೋದ್ಭಾಸಿ
ತಂಸದ್ವಿಪ್ರ । ಕುಲದಂತೆದಾನಧಾರಾಗ್ರಹಿವಿಪುಳಕುರು। ಬಲದಂ
ತೆಗುರುಕರ್ಣವಾತಜವಿಭೀಕರಂಹಿಮಕಿರಣಬಿಂಬದಂತೆ ॥ ಕಲಿತ
ಕರರಾಜಿತಂಸಲೆವಾಸುದೇವನೋ । ಲ್ಬಲಯುತಂತಾನೆನಿಸಿಸಂತ
ತಂಗುರುತರದ । ಕಲಿಗಜಾಸುರನದ್ಭುತಾಕೃತಿಜಗತ್ತ್ರಯಕೆಬೀರಿ
ದುದುವಿಸ್ಮಯವನು ॥೭॥ ಇರದೆನೋಡುವನೋಟಮಖಿಳಜನಗಳ
ಕಾಟ । ಮುರಿದೆನಿಸುವೆಡೆಯಾಟಮುವನಿವಹಗೆದೆಯಾಟ। ಕರಜಾ
ತಶೀಕರಂಪರಸುಭಟಭೀಕರಂಸುಳಿವಪರಣೆಗಳಿಗಳಿವು॥ ಸುರಿವಘ
ನಮದಧಾರೆಸುರಜನಕ್ಕಸಿಧಾರೆ। ಧರೆಯೊಳೆಳೆಯುವಬಾಲಮುಘಟ
ತದಕರವಾಳ। ಮುರುಕರ್ಣಭವವಾತಮುಮರತತಿಭಯಜಾತಮೆ
ಸೆಗಜಾಸುರನೆಸೆದನು ॥೮॥ ನೋಡಲುಮ್ಮತ್ರವರಿಲ್ಲ ಕರಿಯೊಡನೆನಿಂ
ದುಪೋ। ರ್ಯಾಡಲುಮ್ಮತ್ರವರಿಲ್ಲ ತದ್ದೃಷ್ಟವಳೆಗೆಮಾ। ತಾಡಲುಮ್ಮತ್ರವರಿ
ಲ್ಲ ಸಗ್ಗಮರ್ತ್ಯಬಿಲಲೋಕಾದಿಲೋಕಂಗಳೊಳಗೆ ॥ ಕೋಡದವರಿಲ್ಲ
ಮಾರಾಂತುನಿಜತನುವನೀ । ಡಾಡದವರಿಲ್ಲ ಸರ್ವಸ್ವಮಂಬಿಟ್ಟುಕೆ।
ಟ್ಟೋಡದವರಿಲ್ಲ ವಿಕ್ರಮದಸಿರಿಯಂಬಣ್ಣಿಸಲ್ಕರಿದುಕರಿದನುಜನ ॥೯॥
ನಿಗ್ಗವದೊಳೀಡಿರಿಯೆಕುಲಪರ್ವತಂಗಳುಂ। ನುಗ್ಗುನುಸಿಯಪ್ಪವುಕ
ರೋದ್ಭೂತವಾತದಿಂ । ಸಗ್ಗಮೊದಲಾದಮೇಲಣ ಲೋಕವಿತತಿ
ಯುಂಮಾಲೆಗಳೆಚಂಡಿನಂತೆ॥ ಉಗ್ಗಿನಿಂದುತ್ಪತನಪಾತತೆಯುಳಿದುರ್
ದಿದ। ದಗ್ಗಳೆಯತನವನಾರ್ಪೇಳ್ದಪರಮ್ಮಜಗಂ। ಪೆಗ್ಗಳೆದಭಯರಸದೊ
ಳೋಲಾಡುತಿರ್ಪುದದನೇನೆಂಬೆನುಕ್ಕರಿಯನು ॥೧೦॥ ಗಜ್ಜನೆಯದನಿಗೆ
ಯನ್ಯಪ್ರಾಣಿಸಂಕುಲಂ। ನಿರ್ಜೀವಮಾಯ್ತುಪಾದಪ್ರಹಾರಂಗಳಿಂ। ಗು
ರ್ಜುಗೊಂಡಂಫಣಿಪನಗ್ಗಿದವುದಿಗ್ಗಜಂಜರ್ಜದುದುಕಚ್ಛಪಾಂಗಂ॥ ನಿ
ರ್ಜರಪುರಂಸರಕುದೆಗೆದುಳಿದಲೋಕತತಿ। ವರ್ಜಿತಸಮಸ್ತಜನಮಾ
ಯ್ತುಕಟಧರೆಯೊಳಿದ। ನಾರ್ಜಯಿಸಿದಪರೆಂದುಮೂಜಗಂತಲ್ಲಣಿಸು
ತಿರ್ದುದದನೇನೆಂಬೆನು ॥೧೧॥ ಭಗ್ನಮಾಯ್ತುಡೆಕಲಂದದಿಜಗಂಬಹು
ಭೀತಿ। ಲಗ್ನಮಾಯ್ತಲ್ಲಿಯಜನಂಗಳ್ಗೆಸುರಪಾಲ। ಕಾಗ್ನಿಯುಮನಿರು
ತಿವರುಣಾನಿಳಕುಬೇರಹರರೇನಾದರೋಖರದೊಳು ॥ ದಿಗ್ನಾಗವಿತ

ತ್ರಿಗೋಣ್ಮ್ರಿಸಿದುನಸಿದುದಕದೋ| ಳ್ಮ್ರಿಗ್ನವಾಯಿತುಗಜಾದಶಾರ್ದ್ರ
ವುಂಬಂಣಿಪೊಡೆ| ವಾಗ್ನಾಗರಾಜರ್ಗಗೋಚರವುದೇನೆಂಬೆನದರ
ದ್ಭುತಾಕೃತಿಯನು||೧೨|| ಆಕಸ್ಮಿಕದೊಳಾದದುಷ್ಟಗಜವಕಟಕಟ|
ಲೋಕಂಗಳಂತಿಂದುತೇಗುತದೆಶಿವಶಿವಪಿ| ನಾಕಿಯೇನಾದನೋಹ
ರಿಯೆತ್ತಪೋದನೋಬೊಮ್ಮಂಗದೇನಾದುದೋ||ಲೋಕಕರ್ತುಗ
ಳೆಂಬಮಾತುಗಳುತಮಗಿನ್ನು | ದೇಕೆಸಾಕೆನುತೆನಾನಾಜನಂಭೀತಿ
ಯಿಂ| ವ್ಯಾಕುಲಾಂತಃಕರಣರಾಗಿಚಿಂತಿಸುತಿರ್ದುದೇನೆಂಬೆನಷ್ಟರಿ
ಯನು||೧೩|| ದುರುಳನೆನಿಸುವಗಜಾಸುರನಳಿಗೆಕಂಗೆಟ್ಟು|ಸುರಪ
ಮುಖ್ಯಾಮರಕದಂಬಕಂಬಂದುಪಂ | ಕರುಹಭವಕಮಲಾಂಬಕ
ರ್ಗೆದೂರಲ್ಕವನಿರ್ಜಸೇನೆವೆರಸಿಬಂದು|| ಕರಿಯೊಡನನಂತಕಾಲಂ
ಕಾದಿಗೆಲ್ವಬಗೆ| ಯರಿದಾಗಿಸೈನ್ಯಮುಂನೀಗಿಕಡುನೊಂದುಶಂ|ಕರನೆ
ಡೆಗೆಸರ್ವರುಂಬಂದುಬಿನ್ನವಿಪದನಿರ್ಟಲತಟಹಸ್ತರಾಗಿ||೧೪|| ಆಲಿ
ಸುಮಹಾದೇವಖಳಗಜಾಸುರನೆಂಬ | ಕಾಳರಕ್ಕಸನಿರದೆಪಿಟ್ಟಿನಂ
ಮೆಲ್ಲರಂ| ಕಾಳಗದೊಳೋಡಿಸಿಸಮಸ್ತಲೋಕಂಗಳಂಸಂಹರಿಪನೆಂ
ದೆನಲ್ಕ|| ಕೇಳಿಕರುಣದೊಳಂಜಬೇಡೆಂದುಸಂತೈಸಿ| ಭಾಳಾಂಬಕಂ
ವೃಷೇಂದ್ರನನೇರಿಸಕಲಗಣ | ಜಾಲವೊಡನೈತರಲ್ಕೈಲಾಸಗಿರಿ
ಯಿಂದೆಪೊರಮಟ್ಟನಾಕ್ಷಣದೊಳು||೧೫|| ಹರಿಯವಾಹನಿಯುಜನಸ್ಸೈ
ನಿಕಂಸುರಕುಲೇ|ಶ್ವರನಚತುರಂಗಮಾಶಾವರರಸೇನಾಬ್ಧಿ | ಗರು
ಡಗಂಧರ್ವಕಿನ್ನರಯಕ್ಷರಾಕ್ಷಸರಘನತರಬಲಾಂಬುಧಿಗಳು || ವರ
ಭೂತಗಣರುದ್ರಗಣಕುಲದಪಡೆಗಳ | ಟ್ಟರಿಯಿಂದೆಶಂಕರನಹಿಂದು
ಮುಂದೆಡಬಲದೊ|ಳಿರದೆಬರುತಿರ್ದುವ್ವುಗಜಾಸುರನಹವಣೇಂಮಹಾ
ಪ್ರಲಯಮಪ್ಪುದೆನಲು||೧೬|| ಆನೆಗಳ್ಗಣಕೆಯೇಭಾರದಿಂಭೂತಳ
ಕೆ| ಬೇನೆಮಸಗಿತುಕುದುರೆಗಳಿಗದೇಂಗಣನೆಯೇ| ನಾನಾದಿಗಂತ
ಮುಂತುಂಬಿದವುತೇರ್ಗತಾನವಧಿಯೇಧರೆಯನಾಂತ|| ಆನೆಗಳ್ಭರ
ಕೆಕೊಂಬೂರಿದವುಸುಭಟಪ್ರ| ತಾನಕ್ಕಕಡೆಯೆಪದರಜದಿಂದೆಪಿರಿದೆ
ನಿಪ| ಬಾನೆಡೆಯನೆಲ್ಲಮಂತುಂಬಿದುದುಶಿವಶಿವಾಪೇಳಲೇಂವಿಸ್ಮಯ
ವನು||೧೭|| ಬೇರೆಬೇರತುಳಬಲನಿವಹದೊಳುನಿರ್ಭರದೆ| ಚೀರು
ತಿಹಕಾಳೆಗಳಪೊಡೆವಭೇರಿಧ್ವನಿಗೆ| ಗಾರಾಯ್ತುಪಂಕಜಭವಾಂಡ
ಮಾಲಿಸಿದಂಗಜಾಸುರಂತದ್ಧ್ವನಿಯನು|| ಮೂರುಲೋಕಂನಡಗುವಂ
ತೆಪೇರ್ದನಿಯಿಂದೆ|ಕೀರಿಶುಂಡಾಗ್ರದಿಂಧರೆಯನಪ್ಪಳಿಸುತ್ತ| ಮಾ
ರಿನಡೆದಂಹರನಸೇನಾಸಮುದ್ರಕಿದಿರಾಗಿಖಳನುದ್ಧಟನಿಂದಂ ||೧೮||

ನೀಲಾದ್ರಿಬೇಗದಿಂಬಿರದೆಘಟತರದಕೈ। ಕಾಲಾಂತಕಂಬಂದಪ್ಪುದೊಶಿ
ವಶಿವಾಸಂವರ್ತ। ಕಾಲದಮಹಾಂಧಕಾರಂಗಳಾಕೃತಿಯಾಗಿಬಪ್ಪು
ದೋಪೇಳೆನಲ್ಕೆ॥ ಕೂಲಿಯಬಲಾಂಬುಧಿಯುಮುಂಗಡೆಯಸಕಲಸು
ರ, ಜಾಲದೆರ್ದೆಯೊಡೆಬೃಂಹಿತರವಂಗೆಯ್ವುತಕ। ರಾಳರೋಷಶ್ವಾ
ಸಕಂಪಿತಜಗತ್ರಯಂಬರುತಿರ್ದ್ದನದ್ಭುತದೊಳು॥೧೯॥ ದಾರಿಯೊಳಗಿ
ದಿರಾದಘನತರದಪರ್ವ್ವತದ। ಬೇರಸುಗಿದೆತ್ತಿತಕರಾಗ್ರದಿಂದೊಡ್ಡಿತ
ವು। ಹೇರುಹಂಗೆಳೆನಿರದೆಮುರಿದುಗಗನಾಂಗಣಕೆಸಾಲಿಡುತಗಂಡುಶಿ
ಲೆಯಂ॥ ಓರಂತೆಪಿಡಿದುದೆಸೆದೆಸೆಗೆಬೀರುತಗಜರಿ। ಭೋರಿಡುತಧೂ
ಳೆಳೆಂವೊಗವೊಗೆದುಚೆಲ್ಲುತವು। ಹಾರಣಾರಂಭಲಂಪಟಸುರರಸರಿ
ಸದೊಳ್ಮೊಳಗಿದಂಬಳೆರಾಜನು॥೨೦॥ ಇರದೆಹಸ್ತಾಗ್ರದಿಂತೆಗದಿಡು
ವಗುಂಡುಗ। ಳ್ವರಿಕಿಸಬ್ಬರಿಕಲ್ಕುಂಗಳೇವಿಂಚುಗುರು। ತರಮಹಾ
ದಂತಯುಗಮಸಿಡಿಲ್ಗಳಾಗೆಶೀಕರಮೆತುಂತುರ್ವನಿಗಳು॥ ಸುರಿವ
ಮದಧಾರೆಗಳ್ಮಳೆಕರ್ಣತಾಳಭವ। ಮರುತಪ್ರಚಂಡಪ್ರಭಂಜನನೆ
ನಲ್ಪುಟ್ಟ। ಕರಿವಿಲಯಕಾಲದಮಹಾಮೇಘದಂತೆಗರ್ಜಿಸುತನಡೆತ
ರುತಿರ್ದುದು॥೨೧॥ ಎಲೆಲೆಲೋಕಂಗಳಂತಿಂದುತೇಗಿದಮಹಾ। ಕಲಿ
ಗಜಾಸುರನೀತನೆಮಹಾದೇವಹೊ। ಕ್ಕಳಿಯದಿರಿವಂದೆಗಳುಪಿಂತಿ
ರುಗಿಸುಭಟರಂಜದೆಮುಂದುವರಿವುದೆನುತ॥ ಜಲಜಭವಹರಿಸುರೇಂ
ದ್ರಾದಿಗಳುತಮ್ಮನಿಜ। ಬಲವೆರಸಿಮುತ್ತಿದಖರಾರ್ತಿಯುಂವಡೆಬನಂ।
ಜಲಧಿಯಜಲಂಮುತ್ತುವಂತೆಕೋಲಾಹಳದೊಳೇನೆಂಬೆ ನಟ್ಟರಿದು
ನು॥೨೨॥ ಒಂದುದಿಕ್ಕಿನೊಳೆಸೆಮುಸುಂಡಿಗಳತಿವಿತವು। ತೊತ್ತೊಂದು
ದೆಸೆಯೊಳ್ಪ್ರಬಳಗದೆಗಳಪೊಯ್ಲ್ಮೇಣ। ದೊಂದುದೆಸೆಯೊಳ್ಪರಶು
ಗಳಕಡಿತವೊಂದುದೆಸೆಯೊಳುಶಿಲಾವರುಷಂಗಳು॥ ಹಿಂದುಮುಂ
ದೆಡಬಲದೊಳೆಲ್ಲಿಯುಂಬಾಣಂಗ। ಳಿಂದಮುಸುಕುತೆಭಟಬೊರ್ಬ್ಬಿ
ರಿದರಾಗಳ್। ಣ್ಗಂದವಾಡುದುಗಜಂಬೆತ್ತಗಳ್ಬೆಳದದ್ರಿಯಂತೆಘನ
ಸಂಗದೊಳು॥೨೩॥ ಚಿತ್ರವಾಯ್ತೆಸಿದ್ಧರಾಮನೋಡಲುನಿಮಿ
ಷ, ಮಾತ್ರದೊಳುಮುತ್ತಿದಭಟರ್ಗ್ಗಳಂಮುರಿದುಶತ। ಪತ್ರಂಗಳಂಚಿ
ಗುಳಿದುಳಿದುಗಜರಾಜೆಯಂಬಂಡುರುಳ್ಚಿಸಿತೇರ್ಗ್ಗಳಂ॥ ಛತ್ರಚಮರಾ
ಳಿಗಳ್ಕೆದರಿಸಿನಿಟ್ಟೊರಸಿಶತ। ಪತ್ರಭವಹರಿಸುರೇಂದ್ರರಭರದೊಳೆಂಜೇ
ಪ। ಮಾತ್ರಮುಳಿಯದಹಾಗೆಸವರಿದುದುಸುಭಟರಂಮತ್ತಗಜವೇನೆಂ
ಬೆನು॥೨೪॥ ಮುರಳಿಕವಿದುದುಸೇನೆಮುಂದುಬಿಲ್ಪಟ್ಟಮಂ। ಪರಿವೇಷ್ಟಿ
ಪೊಂಷದಿಂಶಾತಕಳಸಂದೋಹ। ಶರಧಿಯಂಕವಿಸಿದರ್ತೆವಿಸ್ತಿದರ್ಮ್ಮದ್ಗರ

ಕತಾರಿಶೂಲಂಗಳಿಂಗಂ|| ಬರಿಕೈಯೊಳೆಡಿಸಿ ಕುದುರೆಯಹಿಂಡುಹಿಂಡ
ನಿ| ಟ್ಟೊರಸಿ ತೇರ್ಗಳನುಚ್ಚುನುರಿಮಾಡಿಯಾನೆಗಳ| ನಿರದೆತ್ತಿ ವಿತ್ತಿ ವಿದು
ಹೊಡೆಚೆಂಡಾಡುತಿರ್ದಂ ಗಜಾಸುರಂ ಸಂಗರದೊಳು||೨೫|| ಇರಿದಿರಿಯೆ
ಕಂಗೆಟ್ಟು ತಳ್ಗವಮರ್ಗಳ್ಗವರ್| ಬರಿಕೈಯಪೆಟ್ಟಿನಿಂದಳ್ಕುವರ್ಬಳ್ಕು
ವರ್. ಚರಣಂಗಳಿಂದರೆಯೆ ಸುಕ್ಕುವರ್ ಕಳ್ಕುವರುಮ್ಮಗಿನಿಂ ಶ್ರೋಣತ
ವನು || ಭರದೆ ಬೆಂಬತ್ತಿ ಜಿಟ್ಟೋಡುವರ್ಕ್ಕೋಡುವರ್| ಮರಗೊಂಬಿ
ನಿಂಬಡಿಯಲಡಗುವರ್ನಡುಗುವರ್| ಕರಿಯಿಂತು ಸದೆವುದು ವಿಘಾತಿ
ಯಿಂ ಖಾತಿಯಿಂ ಮತ್ತದಭಟವ್ರಜವನು||೨೬|| ಹರಿಕೆರಳ್ದಂ ಮುಳಿ
ದನಬ್ಜಜಂ ರೋಷಮಂ| ಧರಿಸಿದಂ ದೇವೇಂದ್ರನಾಶಾಧಿಪರ್ಕೋಪ| ಭ
ರಿತಮಾನುಷರುದರುಬ್ಬಿದ್ದರಾಗರುಡಗಂಧರ್ವಬಲದಭಟರು|| ನಿರು
ತಮಿಾಕಣೆಯದೊಳು ಕಲಗಜಾಸುರನುರವ| ನೆರಡುತುಂಡಾಗಿಸೀ
ಳದೊಡೇಕೆ ಕೈಗಳೊಳು| ಧರಿಸಿದಾಯುಧವೆಂದು ಮತ್ತದರ್ಪಟು
ಭಟರ್ಪೇಳಲೇನಚ್ಚರಿಯು ಸು||೨೭|| ವೀರರಿಂತೊಂದೊಂದು ದೆಸೆಗಳೊ
ಳುಮತ್ತ ಪ್ರಹರಿಸಿದರೆನಿತಸ್ತ್ರಮಂಟನಿತರಿಂದೆಗಂ| ಭೇರಿಭೇರಿಗ
ಳಚಂಬಕಡಕ್ಕಡಾಡೆಗಳನಿಸ್ಸಾಳದಾರ್ಭಟೆಯೊಳು|| ವಾರಿಜಭವಾಂ
ಡಮುಳವಳಿಯೆ ಮೂಜಗದಸಂ| ಹಾರಕಾಲವೋ ಮಹಾದೇವಸೋಜಿ
ಗವೆನಲು| ವಾರಣಾಸುರನನಿರಿದಭಟರ್ತಮತಮಗೆಪೇಳಲೇಂ
ವಿಸ್ಮಯವನು||೨೮|| ಸುರಪಾಗ್ನಿಯಮನಿರುತಿವರುಣವಾಯುಕು
ಬೇರ| ಹರರೆಂಬಸಕಲದಿಕ್ಪಾಲಕರಬೆನ್ನಟ್ಟಿ| ಚರಣಂಗಳಂ ಪಿಡಿದು
ತತ್ತದ್ದಿಗಂತಕೀಡಾಡಿದುದು ಮಿಕ್ಕಮರರಂ|| ಕರಜಾತನಾಯುವಿಂಬಿ
ವಳೆತೂರಿದುಗುಪಂ| ಕರುಣಭವನಂತುಡುಕಿ ಸತ್ಯಲೋಕದೊಳೆ
ಸುಖ| ಮಿರು ನೀನೆನುತ್ತ ಬೀರಿದುದಿದೇಂ ಶಿಕ್ಷಾಸಮರ್ಥನೋ ಯಿಾ
ಜಗದೊಳು ||೨೯|| ಕುದುರೆಬರುದೊರೆಯಾಯ್ತು ಕರಿಯಹಿಂಡಡಗಿ
ದುದು| ತ್ರಿದಶರುರೆದಿಕ್ಕುಗೊಬ್ಬೊಬ್ಬರಾದರ್ವೀರ| ರಥಟುಕೊಳ್ಳೆದು
ಮುಘುರೆಪೂತೆನುತ ಪುಂಖಾನುಪುಂಖದಿಂ ಕಣೆಗರವುತ|| ಮದನಪಿತ
ನೆಸವ ಕಾಂಚನರಥದೊಳಡ್ಡೈಸೆ| ಬಿದುಗೆಪರಾಜುವಿನಮಾಳ್ಕೆಯಿಂ
ರಥದಬಳಿ| ಗೊದಗಿಪಿಡಿದಪ್ಪಳಿಸೆ ಕೆಲಸಿಡಿದು ಮಾಧವಂಗದೆಗೊಂಡು
ಬೊಬ್ಬಿರಿದನು||೩೦|| ಹರಿಬಳಿಕಸಿಸ್ಮನಾದಂ ಗೆಯ್ವುಗದೆಯಿಂದೆ| ಕ
ರಿಯಮಸ್ತಕವನಪ್ಪಳಿಸಲಾಘಾಯುಮಂ| ಸರಕುಮಾಡದೆ ಪರಿದು
ಬೆನ್ನಟ್ಟಿ ಕೆಲವಡಿಯೊಳಾತನಂ ತುಡುಕಿ ಪಿಡಿದು|| ಸರಸಿಜಾಕ್ಷಂ ಜು
ಣುಗಿಯುರದೊಳಂಘ್ರಿಸಿನಿಂದು| ಭರದೆ ಬೊಬ್ಬಿರಿಯಲಾಲಿಸುತ ಕೆ

ಲವೆಡೆಗಳಂ॥ ಪತಿವ್ರತ್ತೆನಿಲುತವೊಲವ್ರತಸರೋಜಾಂಬಕನಸುಳಿ
ವೆನಾಲಿಸುತಿರ್ದುದು ॥೨೧॥ ಸುರರಿಗಾವಿಧಿಯಾಯ್ತು ಪಂಕರುಹಸಂ
ಭವಂ । ಕರಿಯುಟ್ಟದೇಪುಣ್ಯಮಾಗಿಪ್ಪೋದಂರಮಾ । ವರನಿಪುರಮ
ಧ್ಯದೊಳ್ಸಿಕ್ಕಿದಂಕೆಟ್ಟವೆನುತಖಿಳಲೋಕದಜನಗಳ್॥ ಹರನಮ
ರೆಪೊಕ್ಕು ಮೊರೆಯಿಡೆಕರುಣದಿಂಮಹೇ। ಶ್ವರನಾಪಿನಾಕಮಂಕೊಂ
ಡುಜೇವಡೆದುನಿ। ಷ್ಠುರಬಾಣಮಂಪೂಡಿನೋಡಿದಂಕರುಣಾಕಟಾ
ಕ್ಷದಿಂಖಳಪತಿಯನು ॥೨೨॥ ನೋಡಿದಿವ್ಯಾಸ್ತ್ರದಿಂದೆಸೆಯೆಗಜಮ
ಸ್ತಕಂ। ಕೂಡೆಪರಿದುದುಮುಂಡಮಿಳೆಯೊಳಗೆಕೆಡೆದುದಿದ । ನೋ
ಡಿಸಂತೋಷಮಯಸಾಗರದೊಳೆದ್ದುದುಜಗಜ್ಜನಂತತ್ಕ್ಷಣದೊಳ್ ॥
ಮೂಡಿದುತ್ಸವದಿಂದೆಗಂಧರ್ವಪತಿಚಂದ್ರ। ಚೂಡನಪದಂಗಳೆನಮಿ
ಸಿಮತ್ತನುವಿನೋ। ಳ್ಮಾಡೆನೀನೊಂದುಕುರುಪಂಧರಿಸಬೇಕೆಂದು
ತುತಿಸಿದಂಭಕ್ತಿಯಿಂದಂ ॥೨೩॥ ಕರಿಚರ್ಮಮಂತೆಗೆದುಪೊದ್ದಗಂ
ಧರ್ವನಂ। ಕರೆದುಗಣಪದವಿಯಂಕೊಟ್ಟದೇವರ್ಕಳಂ । ಕರುಣ
ದಿಂಸಂತೈಸಿಗಜಮಸ್ತಕವನಾಂತುಲೀಲೆಯಿಂದಂನಟಿಸುತ॥ ಹರುಷ
ದಿಂಕೈಲಾಸದರಮನೆಗನಡೆತರಲು। ಗಿರಿಸುತೆಯಮೈದಿಗುರಿನಿಂದಾ
ದೆನಂದನಂ । ಹರನತಡೆಯಲುಖಡ್ಗದಿಂತಲೆಯರಿದುನಭಕಿಟ್ಟಶಿವ
ನೊಳಪೊಕ್ಕನು ॥೨೪॥ ಸುತನಳಿದಸುದ್ದಿಯಂಕೇಳ್ದುನೊಂದುಗಿ
ರಿಸುತೆಹರನಕೂಡೆಮುನಿದಿರೆದೇವಿನಿನ್ನನಿಜ । ಸುತನಿರವನೋ
ಡೆಬಾರೆನುತಕರತಂದುಗಜಾಸುರನಮಸ್ತಕವನು । ಅತಿವೇಗದಿಂ
ಮುಂಡಕೊಂಡಿಸಲ್ಪ್ರಾಣಮಾ। ರುತನೈದೆತೀವಿದುದುತದ್ರೂಪಮಂ
ಕಂಡು। ಮುತುಳತರಭಿನ್ನಮಾನಸೆಯಾದಪಾರ್ವತಿಗೆಪರಮೇಶನಿಂ
ತೆಂದನು ॥೨೫॥ ರೂಪಿದುವಿಕಾರವಾಯ್ತೆಂದುಗಿರಿಜಾತೆಸಂ। ತಾ
ಪಮಂಮಾಡದಿರೆನುತ್ತಿಭಮುಖಂಗೆಗಾ। ಣಾಪತ್ಯಮಂಕೊಟ್ಟನಿ
ನ್ನಭಜಿಸಿದರಿಷ್ಟವಹುದೆಂದುವರವನಿತ್ತು ॥ ಓಪಳಮನಕ್ಕೆಹರುಷ
ಮನಿತ್ತುತೋರ್ಪಲ। ಕ್ಷ್ಮೀಪತಿಮುಖಾಮರರಬೀಳ್ಕೊಟ್ಟಮು
ಡದಿಂವಿ। ರೂಪಾಕ್ಷನೊಪ್ಪಿದಂಕೈಲಾಸಶಿಖರದರಮನೆಯೊಳ್ವಿಲಾ
ಸದಿಂದಂ ॥೨೬॥ ಇಂತೆಸವಚನ್ನಬಸವೇಶ್ವರಪುರಾಣಮಂ । ಸಂತ
ಸದಿಬರದವರ್ಗೋದಿದರ್ಗರ್ಥವಾ । ದ್ಯಂತಮಂಬಿಡದೆಪೇಳ್ದರ್ಗೆಪ
ಠಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ ॥ ಸಂತತಂಸಕಲಸುಖಮಂಸಕ
ಲಭೋಗಮನ । ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ । ಕಂ
ತುಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ ॥೨೭॥

ಮೂರನೆಯಕಾಂಡದಲ್ಲಿ ೧ನೇ ಸಂಧಿ ಮುಗಿಯಿತು

## ೭ನೇಸಂಧಿ.

ಸೂಚನೆ॥ ಶಿವಲೋಕವಿಸ್ತಾರಮಂ ಶಿವಸ್ಥಾನಮಂ ಶಿವನರಾಜ್ಯ
ಕ್ರಮುವನೆಲ್ಲವಂ ವಿಸ್ತರಿಸಿ। ಶಿವನ ಸುಜ್ಞಾನರೂಪಂ ಚೆನ್ನಬಸವ
ನಾಸಿದ್ಧರಾಮಂಗೊರೆದನು॥

ಪದ॥ ಅಣಿಯರಂ ಕೈಲಾಸಮಂದಿರದೊಳೊಪ್ಪುತಿಹ। ಮಣಿಮಯ
ದನೆಜ್ಜೆಯೊಳು ರತಿಗೈದು ಮಿಗೆ ತದಂ। ಗಣದಲೀಲಾಸರೋವರದೊ
ಳ್ಕೃಷಾರ್ತೆಯಂ ಜುಳಿಯೊಳಗೆ ಜಲಮನೆತ್ತಿ ॥ ಮಣಿದು ಮಣಿದೀಕ್ಷಿ
ಸುತ ಬಿಡುತ ಮೊಗದೀಕ್ಷಿಸುತ್ತೆಣಿಕೆಗೊಳುತಿಹ ಹಿಮಗಿರೀಂದ್ರಜಾ
ಘನಮುಗ್ಧ। ಗುಣಕೆ ನಸುನಕ್ಕು ತಲೆವಾಗಿಸುವ ಪಂಪಾವಿರೂಪಾಕ್ಷನು
ಲಹೆಮ್ಮನು॥೧॥ ಏಕಚಿತ್ತದೊಳಾಲಿಸೈ ರಾಮ ಬೊಮ್ಮಾಂಡ। ಮೇ
ಕನಕಮಯ ಶಿವಾಲಯಮುದರತುದಿಯುಮುಂ । ಕಾತ್ತಿಕಾದಕಳಶಮಿ
ಪ್ಪಂತೆ ಶುದ್ಧಸ್ಫಟಿಕಸಂಕಾಶದಿಂದೆ ಶಿವನ॥ ಲೋಕಮಿಪ್ಪುದು ಸಕಲ
ಬೊಮ್ಮಾಂಡಸತ್ಫಲಂ। ನೀಕಕ್ಕೆ ಕಲ್ಪತರುವೆನಲಖಿಳವೇದಾದ್ಯ।
ನೇಕತರ್ಕಂಗಳೆಸಿಲುಕದ ಪ್ರತಿಮಹಾಮಹಿಮದೊಳದೇನೆಂಬೆನು॥
ಇಂತೆಸವ ಶಿವಲೋಕಮಂ ತಧಿಕಪುರರೂಪ। ಮಂತಳೆದು ಕೋಟಿ
ಮೂವತ್ತೆರಡು ಯೋಜನಾ। ದ್ಯಂತದಳವಿಯೊಳನಿತು ವಿಸ್ತರದೊಳ
ತುಳಜೋತಿಮಯದ ಕೋಂಟೆಯಿಂದ॥ ಸಂತತ ಪರಬ್ರಹ್ಮಪೂರ್ಣ
ಸತ್ಕೋಶಗೃಹ। ದಂತೆಂಟು ಬಾಗಿಲ್ಗಳಿಂದಲ್ಲಿಗಲ್ಲಿಗೆ ಕೈ । ತಂತಾಂತ
ಕಾಕಾರದಷ್ಟಭೈರವರ ಕಾಪಿಂಕಂಗೆಡಿಲ್ವುದು॥೨॥ ಕನಕಾರು
ಣಾರಕ್ತಪೀತನೀಲೋಗ್ರರತ್ನ। ಘನಹೇಮವರ್ಣಕಾಯಂಗಳಿಂ ಹಂ
ಸಾಜ। ಘನಕೇಕಿ ನಾಗಾರಿ ಮಹಿಷ ವಾರಣ ಕಾಕ ಗಿರಿಕವಾಹಂಗಳಿಂ
ದಂ॥ ವಿನುತಗುಣನೇತ್ರರುಂ ಚಂಡಕೋಪೋನ್ಮತ್ತ। ನನಯ ಕಾಪಾಲಿ
ಭೀಷಣಮಹಾಸಂಹಾರ। ರೆನಿಪ ಪೆಸರಿನ ಭೈರವರ್ಚತುರ್ಭುಜತ್ರಿ
ಣೇತ್ರಂಗಳಿಂ ಕ್ರಮತಪ್ಪದೆ ॥೪॥ ಆರಯಲ್ಬ್ರಹ್ಮಿಮಾಹೇಶ್ವರಿಸು
ಘೋರಕಾಮ। ವಾರಿವೈಷ್ಣವಿಯತುಳವಾರಾಹಿ ಮಾಹೇಂದ್ರಿ। ಯೋ
ರಂತೆ ಚಾಮುಂಡಿ ಕಾಳಿಯುಂ ದೆಂಬ ಶಕ್ತಿಗಳ ಸಮ್ಮೇಳದಿಂದಂ॥ ಓ
ರೋರ್ವಭೈರವರ್ಗೆಪ್ಪತ್ತು ಕೋಟಿಪರಿ। ವಾರಮುಸೆಯಲ್ಕೆ ಸಾವಿಭ
ವದಿಂ ಶಿವಪುರ। ದ್ವಾರಂಗಳೆಂಟು ಪೂರ್ವಾದಿಯಾಗಿರಲಲ್ಲಿ ಕಾದಪರ್ರು
ತ್ನವದೊಳು ॥೫॥ ಈ ಪರಿಯೊಳೆಂಟು ಬಾಗಿಲ್ಗಳಿಂದೊಪ್ಪುತಿ। ರಪ್ಪ ಪು
ರದ ಶಶಿಸೂರ್ಯವೀಧಿಗಳು ಲಕ್ಷಮುರೆ। ಗೋಪುರಗಳು ಳಾಳ್ಕಕವಾಟಂ
ಗಳಗಣಿತಂ ಗೃಹಮಸಂಖ್ಯಾತಂಗಳು॥ ಪಾಪರಹಿತರ್ಕೆಂಗೊಬ್ಬೊ

ಬ್ಬಿಗಣಪರ್ವ್ವಿ॥ರೂಪಾಕ್ಷನಾಜ್ಞೆಯಿಂದತುಳಬಲವೆರಸಿಪ್ರ। ತಾಪದಿಂ
ಕಾದಿರ್ಪರನುದಿನಂತಮತಮಗೆಬಾಳಸುಯಿಧಾನದಿಂದಂ॥೬॥ ನಿ
ಷ್ಕಾಮಿಗಳ್ನಿಗಮಸುಪ್ರೇಮಿಗಳ್ಮಾಡೆ। ದುಷ್ಕರ್ಮನಿರ್ದ್ದಿತರಾತ್ಮಯೂ
ಪ್ರವರ್ಜಿತರ್। ನಿಷ್ಕಂಪಚಿತ್ತರುನ್ನತಸತ್ಯವೃತ್ತರಘನಾಶರವ್ಯಾತ
ಶೀಲಶರು ॥ ದುಷ್ಟದೂರಸುಗುಣಪೂರರತಿನಿಪುಣರ್। ರಷ್ಕರೋ
ಟೀಧರನಭಕ್ತರವ್ಯಕ್ತರುರೆ। ಕಿಷ್ಕಿಂದಮಾಗಿರಲ್ತತ್ಪುರಂಸುಕೃತಂ
ಗಳಿಹಬೀಡಿನಂತೆಸುದುಗು ॥೭॥ ಗೋತ್ರಂಗಳೊಳ್ಮೆರವಕನಕಾದ್ರಿ
ಯಂತೆನ। ಕ್ಷತ್ರಂಗಳೊಳ್ಮೆರವಪೂರ್ಣಶಶಿಯಂತಖಿಳ। ಚಿತ್ರಮಣಿ
ಮಧ್ಯಚಿಂತಾರತ್ನದಂತೆಪುಣ್ಯಗ್ರಹಂಗಳನಡುವಣ॥ಮಿತ್ರಮಂಡಲ
ದಂತೆಸುಕ್ಷೇತ್ರದೊಳ್ಕಾಶಿ। ಚೇತ್ರದಂತಖಿಳಗಣಗೃಹಗಳಾನಡುವೆ
ಶಿಖಿ। ನೇತ್ರನರಮನೆಯೈದುಕೋಟಿಯೋಜನದವಿಸ್ತೀರ್ಣದಿಂದೊ
ಪ್ಪಿರ್ದುದು ॥೮॥ ಬಳಿಕಮಹಾಭವನಮಂಬಳಸಿಕಡುಚೆಲ್ವಿನಿಂ। ಧಳ
ಥಳಿಸಿಪೊಳೆವಪಳುಕಿನಮುಗಿಲಗೂಪದಿಂ। ಬಳೆದುಶಿವತತ್ವಮಿರ್ಪ್ಪ
ದುದಶಸಹಸ್ರಯೋಜನದುನ್ನತಿಯೊಳದಕ್ಕೆ॥ಕಳಕಳಿಪಚನ್ನದೆನೆಶ
ತಯೋಜನಂಗಳಿಂ। ಬಳತೆಭಕ್ತಿಜ್ಞಾನಪರಮವೈರಾಗ್ಯನಿ। ರ್ಮ್ಮಳಮು
ಕ್ತಿಗಳೆನಾಲ್ಕುಬಾಗಿಲಾಗಿರಲಭವನಂತಃಪುರಂಮೆತದುದು॥೯॥ ಸಿಂ
ಗರದೊಳಾಸುರಪಯಮವರುಣಧನದದಿ। ಕ್ಕಂಗಮರಿಕನಕಹರಿನೀ
ಲಮೌಕ್ತಿಕಮಾಣಿ। ಕಂಗಳೊಳ್ಬೆಳಗಿನಿಂಋಗ್ಯಜುಸ್ಸಾಮವೇದಾ
ಥರ್ವ್ವಣಾಖ್ಯಂಗಳೆ॥ ತುಂಗತರಲಕ್ಷಯೋಜನದುದ್ದದಿಂಗೋಪುರಂಗಳಾ
ಕೃತಿಯೊಳಿರೆನಂದಿಯುಂವೀರಭ। ದ್ರಂಗರುವಮಾಕಾಳನೀಲಲೋ
ಹಿತರಲ್ಲಿಕಾದುಕೊಂಡಿರುತಿರ್ಪರು॥೧೦॥ ಅಂತಿನಿಬರಾಚತುರ್ದ್ವಾ
ರಂಗಳೊಳುವೇತ್ರಮಾಂತುಹರಿಯಜಮುಖ್ಯರಂನಿಲಿಸಿಮುತ್ತಮಾ।
ಕಾಂತನೇಮಂಗೊಂಡುಪೊಗಿಪ ಪೊರಮಡಪವಿನಿಯೋಗಂಗಳಿಂದಿ
ರ್ಪ್ಪರು॥ ಅಂತಃಪುರದಗೃಹಾಕಾರದಿಂದತುಳವೇ। ದಾಂತಮಿರ್ಪ್ಪುದು
ಬೇರೆಕೋಟಿಯೋಜನದಳತೆ। ಯಂತಳೆದುಸತ್ಪ್ರಣವವೇಶಿವಸಭಾ
ಸ್ಥಳಾಕಾರಮಾಗಿರುತಿರ್ಪ್ಪುದು॥೧೧॥ ಆಗರನಸಭೆಯಬೆಳಗಿನಮಂ
ದೆಕಂಗೊಳಿಪ। ಸಾಹಸ್ರಕೋಟಿರವಿಗಳತೊಳಪವದನಂಗ। ಳೊಹ
ಸಲ್ಪಳಿಗಂಚುಕನ್ನಡಿಯೊಳಿರ್ಪಮಾಕೃಷ್ಣರಮಹಾಕಾಳಿಯ ॥ ದೇ
ಹಂಗಳೈದೆಪಲ್ಲಟಪವಚ್ಚರಿಯುದರ। ಮಾಹಾತ್ಮೆಯುನ್ನೋಡಬಲಖಿ
ಳಬೊಮ್ಮಾಂಡಂಗ। ಳೇಹಾಲಕಡಲೊಳಗೆಪಡಿಬಿಂಬಿಸುವಕುಕ್ಕು
ಟುಂಡಂಗಳನಲೆಸುವವು॥೧೨॥ ಈಪ್ರಕಾರದಸಭಾಮಧ್ಯದೊಳಗಘ

ವಂಗೆ| ಸುಪ್ರತಾಪಂಗೆ ಸುಲಭಂಗೆ ಸಂಸಾರಬಂ| ಧಪ್ರವಿಧ್ವಂಸಂಗೆ ಹಂ
ಸಂಗೆ ಲಕ್ಷಯೋಜನದ ವಿಸ್ತೀರ್ಣಮೆಸೆಯೆ|| ಸುಪ್ರಭೆಯೊಳಷ್ಟಮಹಾ
ದೈಶ್ವರ್ಯಮವು ನೋಡೆ, ಅಪ್ರತಿಮ ಚರಣಂಗಳೆಂಟೆನಿಸಿ ತೋರೆ ವಮ|
ಕ್ತಿಪ್ರತಿಷ್ಠಿತ ಸಿಂಹವಿಷ್ಟರಂ ಕಂ೨ ಪುಣ್ಯದ ಬೆಳಸಿನಂತಿರ್ಪ್ಪುದು||೧೩|| ತ
ನ್ಮಹಾಪೀಠದ ಸಿಂಹಾಸನದ ಮೇಲೆ ಗಿರಿ | ಜೋನ್ಮಸ್ಮಿತಕುಮುದಚಂ
ದ್ರಶೇಖರಂ | ಸನ್ಮುನಿಸ್ತೋತ್ರಪಾತ್ರಂ ತ್ರಿನೇತ್ರಂ ಭಕ್ತವತ್ಸಲಂ ಬ್ರ
ಹ್ಮಾದ್ಯರ|| ಹೃನ್ಮಧ್ಯಶೋಭಿತಾಂಗುಮಂಗಳಂ ವಿವ | ಸ್ವನ್ಮಂಡಲಾ
ನೇಕಕೋಟಿಪ್ರಕಾಶಂ ಜ | ಗನ್ಮಹಾಜನನಸ್ಥಿತಿಪ್ರಳಯಕಾರಣ ವಿ
ರೂಪಾಕ್ಷನೊಪ್ಪಿರ್ದನು||೧೪|| ತೊಳಪ ಮುತ್ತಿನ ಮಾಣಿಕದ ಪೊನ್ನ
ನೀಲದೊ | ಳ್ವೆಳಗಿನಿಂ ಪಶ್ಚಿಮೋತ್ತರಪೂರ್ವದಕ್ಷಿಣಂ | ಗಳೊಳೆಸ
ದ್ಯೋಜಾತಮುಂ ವಾಮದೇವಮುಂ ತತ್ಪುರುಷಮೆಸೆವಘೋರಂ||
ಪೊಳೆವುತಿರಲವರಗ್ರದೊಳ್ಸ್ಫಟಿಕವರ್ಣದಿಂ | ತೊಳಗುವೀಶಾನ
ಮುಖಮಿರೆ ತನ್ಮುಖಂಗಳೆಂಬಳಸಿ ತಂನಾಮ ಪುರುಷಪಂಚವದನ
ದಿಂ ತನ್ಮಂತ್ರದಿಂ ನುತಿಪರು ||೧೫|| ಇಂತೆಸೆವ ಪಂಚಾಸ್ಯ ಪಂಚದಶನ
ಯನಂಗ| ಳಿಂತೋರ್ಪದಶಭುಜ ವಿಷಗ್ರೀವ ಗಜಚರ್ಮ| ದಿಂತಳೆದ ತ
ಲೆಮಾಲೆಗಳ ಸಾಲ್ಗಳಿಂ ಚಂದ್ರಕಾಂತಮಯ ತೇಜದಿಂದಂ || ಕಂತುಭ
ಸ್ಮೋದ್ಧೂಳಿತಾಂಗದಿಂ ಲಲಿತಫಣಿ | ಸಂತತಿಯ ವಿಲಸಿತಾಭರಣದಿಂ
ದೊಪ್ಪಿದನ| ನಂತದೇವರ ದೇವನಖಿಳಸುರರಕ್ಷ ವಿರೂಪಾಕ್ಷನೋಲ
ಗದೊಳು||೧೬|| ಶಂಭುವಾಮಾರ್ಧಪೀಠದೊಳೊಪ್ಪಿದಳು ದೈತ್ಯ| ಕುಂ
ಭಿಕುಂಭಸ್ಥಳದಳತ್ರಿಂಶಯಾನೆತ| ತತ್ವಾಂಬೋಧಿದೇವಿ ದೇವಾಳಿವಂ
ದಿತೆ ಕಾಳಿ ಕಾಲಾಭ್ರತ್ರೀವ್ರವರ್ಣೆ|| ಜಂಭಾರಿನುತೆ ಜಗತ್ಪಾವನತೆ ದ
ಕ್ಷಸುತೆ| ತಾಂ ಭಕ್ತವತ್ಸಲೆ ಮಹಾಮಹಿಮೆಯತಿ ವಿಭವ| ದಿಂ ಭವಾನಿ
ಶ್ಯಾಮೆ ಫಣಿವೇಣಿ ಶರ್ವಾಣಿ ಶಂಕರನರಾಣಿಯೆಂದು||೧೭|| ಶಕ್ತಿಸತಿಯ
ರ ತಂಡತಂಡಗಳಿಂದ ಈಶ| ಭಕ್ತಸತಿಯರ ಮೊತ್ತಮೊತ್ತಂಗಳಿಂದಂ ವಿರಕ್ತ
ಸತಿಯರ ನೆರವಿನೆರವಿಯಿಂ ರುದ್ರಕನ್ಯೆಯರ ಸಾಲ್ಸಾಲ್ಗಳಿಂದಂ|| ಉಕ್ತ
ಸತಿಯರ ಪಂತಿಪಂತಿಯಿಂದುರಿತನಿ | ರ್ಮುಕ್ತಸತಿಯರ್ಕಳಿಕ್ಕೆಕ್ಕೆಯಿಂ
ಸ್ವರ್ಗಸಂ| ಯುಕ್ತಸತಿಯರ ಬಳಗಬಳಗಮೋಲೈಸೆ ಶಿವನರಸಿಯಿಂತೆ
ಸದಿರ್ದಳು||೧೮|| ನೀಲವರ್ಣರ್ಸುಪೀತಾಂಬರಧರರ್ಕುಂಡಲಾಲಂಕೃತ
ರ್ಕ್ಕೋಮಲಾಂಗರಾಕೌಸ್ತುಭರ್ | ಶ್ರೀಲತಾಂಗೀವಕ್ಷರರು ಶಂಖಗದೆ
ಚಕ್ರಶಾರ್ಙ್ಗಸಂಯುಕ್ತಮಾದ|| ಲೋಲಚಾತುರ್ಭುಜರ್ಮಣಿಮಯ ಕಿ
ರೀಟತ್ರ| ನೋಲಕ್ಷ್ಯಕಾಸ್ತ್ರ ಜನಕರ್ಸ್ಸರಸಿಜಾಂಬಕರ್| ಪೇಳಲೇಂ ಗರು

ಡವಾಹನರೀಶವಾಮದೊಳು ವಿಷ್ಣುಕೋಟಿಗಳೆಸೆದರು ‖೧೯‖ ವಾಣೀವರರ್ಹಂಸವಾಹನರ್ನಿಖಿಳಗೀ। ರ್ವಾಣಜನಕರ್ಕಮಂಡಲದಂಡಮಾಲಿಕಾ। ಪಾಣಿಗಳ್ಸಕಲವೇದಜ್ಞರಬುಜೋದ್ಭವರ್ಕೋಟಿ ಬೊಮ್ಮಾಂಡಂಗಳ ಪ್ರಾಣಿಗಳ ಸೃಜಿಪಕರ್ತೃ ಮಹಾಪ್ರೌಢಿಕೆಯ। ಕೇಣಕಾರರ್ಗ್ಗಹುರ್ವದನರೊತ್ತೊತ್ತೆಯಿಂ। ಸ್ಥಾಣುವಿನಬಲದಕಡೆಯೊಳೆಬೊಮ್ಮಕೋಟಿಗಳು ಕಂಗೆಸೆದರೇನೆಂಬೆನು ‖೨೦‖ ಆಬ್ರಹ್ಮಸೋತ್ತಿಗರ್ಭಸಿತಸಂಪತ್ತಿಗರ್। ತ್ರೀಬ್ರತೇಜರ್ಜಟಾವಿಭ್ರಾಜರಖಿಳದೇ। ವಬ್ರಾತಪೂಜಿತಮುರ್ಕ್ತ್ಯಂಗನಾಯುತರ್ಶಿವಜಪಿತಜಿಂಹಾಗ್ರರು‖ ಸುಬ್ರತಾಚಾರಕರ್ಶೃತ್ರಿಗಣವಿಚಾರಕ। ರ್ಸ್ವಬ್ರಹ್ಮಬೋಧಕಜ್ಞಾನಸಾಧಕರುದ್ಗ್ರ। ಣಭ್ರಾಜಿಕಾರಿಗಳ್ದುರಿತಸಂಹಾರಿಗಳನಂತಮುನಿವರರೆಸೆದರು ‖೨೧‖ ಕೆಂಜೆಡೆಯು ನೆಳೆವೆರೆಯು ನಾಂತೈದುಮೊಗದವರ್। ಕುಂಜರಾಜಿನದವರ್ಭಸಿತಲೇಪರ್ಪಿರಿಗು। ರಂಜಿಪತ್ರಿಶೂಲಾದಿಗಳನಾಂತದಶಭುಜದವೃಷಭವಾಹಕರ್ಳು‖ ನಂಜುಗೊರಲರ್ನ್ನುಡಿಪದಿನೈದುಕಂಣವರ್ ಮಂಜುಳಸ್ಫಟಿಕತೇಜಪ್ರಳಯಕರ್ತೃಗ। ಳ್ತ್ರಿಜಗತ್ಪತಿವಿರೂಪಾಕ್ಷನಿದಿರೊಳು ರುದ್ರಕೋಟಿಗಳು ಕಂಗೆಸೆದರು ‖೨೨‖ ವರಮಹಿಮನಂದೀಶಭೃಂಗೀಶವೀರೇಶ। ಕರಿವದನಸೇನಾನಿನೀಲಲೋಹಿತಮುಂಡ। ಧರಮಹಾಕಾಳಗಜಕರ್ಣಘಂಟಾಕರ್ಣಗೋಕರ್ಣಶಂಕುಕರ್ಣ‖ ಸುರಗಿರಿವಿಪಾತನವಿರೂಪಾಕ್ಷನಿಶ್ಶಂಕ। ಗರುಡಪಕ್ಷಚ್ಛೇದಗಗನಾಂಗಧೂಮಾಂಗ। ಪರಮಕೂಶ್ಮಾಂಡರೊಬ್ಬೊಬ್ಬರೇ ನೂರ್ಪದ್ಮಬಲವೆರಸಿರಂಜಿಸಿದರು।೨೩‖ ಪರ್ವತಾಭರಣವಿಕಟತುಂಗಭೈರವನಿತ್ಯ। ಸರ್ವಸಂಹಾರಮಣಿಭೂಷಣಸಹಸ್ರಮುಖ। ಸರ್ವಪಾತನಮಹಾಭದ್ರಘಂಟಾಕಾಲವಿಶ್ವತೋಮುಖಕರಾಳ‖ ಸರ್ವಜ್ಞವಿಂಧ್ಯಾಪಾತನವಿಜೃಂಭಣರೂಪ। ಸರ್ವಕಂಪನಚಂಡಕೀರ್ತಿಕಂಕಾಳಧರ। ಸರ್ವಾತ್ಮರೊಬ್ಬೊಬ್ಬರಿಪ್ಪತ್ತುಪದ್ಮಬಲವೆರಸಿಕಂಗೆಸೆದಿರ್ದರು‖ ಕಾಲಮರ್ದನವಜ್ರಕಾಯರುಂಡಾಭರಣ। ಕೋಲಾಹಲೋತ್ತುಂಗಸಾಗರಾಪೋಷಣಕ। ಪಾಲಧರವಡಬಾಗ್ನಿತಿಲಕಪ್ರಚಂಡಬಹುವರ್ಣಧೂರ್ಜಟನಿಷ್ಕಳ‖ ಕಾಲಕಂಧರಮೇಘವಾಹನಮಹಾಸೇನ। ಭಾಳಲೋಚನಮಹಾಕಾಯೋಗ್ರರೂಪಘನ। ಕಾಳಮೇಘಾದಿಭಟರೊಬ್ಬೊಬ್ಬರರುವತ್ತುಪದ್ಮಸೇನೆಯೊಳೆಸೆದರು‖೨೪‖ ಸೋಮಪಾತನಸೂರ್ಯಪಾತನಂದಾಭರಣ। ಧೂಮಕೇತುಸಹಸ್ರಕರ್ಣನಾಹಸ್ರಭುಜ। ಕಾಂತಮಾಂಗದಹನದೈತ್ಯಾಂತಕತ್ರಿಭುವನಾಂತಕವಿಧಿಶಿರ

ಚ್ಛೇದನ॥ ಆಮಹಾದಿಗಾವರಣಾಹಾರಿರೇಣುಕಮು। ಹಾಮಹಿಮದಾ
ಟುಕಸುನಾದದಿಕ್ಪಾಲಹರ। ಭೀಮಕಾಯಾದಿಗಣರಂದುಶತಕೋ
ಟಿಸೈನಿಕವೆರಸಿರಾಜಿಸಿಗರು ॥೧೬॥ ನಕ್ಷತ್ರಕ್ಕಂತನಮಹಾಕೇಶಕೆ
ತಸಹ। ಸತ್ರ್ಕಬೊಮ್ಮಾಂಡಭೇದನನಿರೂಪತಾಂಗಾರ। ಭಕ್ಷಣಮಹಾ
ದಂಷ್ಟ್ರಲಲಿತಾಂಗಪಾದಮುಖಮೇಘಮುಖವಿಶ್ವಮಾಲಿ॥ ದಕ್ಷಮ
ರ್ದನವಜ್ರದಂತನಿಜಬಲಬೊಮ್ಮ। ಭಕ್ಷಣಧನಂಜಯಮಹಾಬಾ
ಹುಸುಮನಸಮು। ಪಾಕ್ಷೇತ್ರಪಾಲರೊಬ್ಬರೇಳ್ನೂರ್ಪದ್ಮಸೇನೆ
ಯೊಡನಿರ್ದೆಸದರು॥೧೭॥ದಂಡಧರನುಂದಂಡಬಾಹುವಂತಾಸುಪ್ರ।
ಚಂಡಾರ್ಚದಂಡನಾಥಂಪ್ರಚಂಡಂಮದೋ। ದ್ದಂಡದೀರ್ಘನನರಿ
ವರ್ಗೇರೆಬೇರೆಹತ್ತುರ್ಪದಕೊಡೆಯರೆನಿಸಿ॥ ಖಂಡಪರಶುವಿನದಕ್ಷಿ
ಣಭಾಗದೋಳ್ಮನಂ। ಗೊಂಡುಪಾಶುಪತಾಸ್ತ್ರಮೇದಿವ್ಯರೂಪಾಗಿ।
ಕೊಂಡಾಡುತಭವನಂಬೆಸನನುರೆಬೇಡುತಿರ್ಪುದು ಪೇಳಲೇನೆಂದ
ನು॥೧೮॥ ಸಚಿವಾಮದೇವರುಂಜ್ಯೇಷ್ಠರುಂಶ್ರೇಷ್ಠರುಂ। ಕಲವಿಕರಣ
ರುಮಸವಕಲರುಂನಿಧಾನಿಸ। ರ್ಬಲರುಂಬಲಪ್ರಮಥರುಂಮನೋ
ನ್ಮನರುಂಮಹಾಸರ್ವಭೂತದಮರುಂ॥ ತಿಳಿಯಲೀರುದ್ರಗಣಮಸ
ವಸಂಖ್ಯಾತಗಣ। ಕುಲಕಧಿಪರಾಗಿತತ್ತ್ವಂನಾಮಶಕ್ತಿಗಳು। ತೊಳಗು
ತಿರೆವಿಭವದಿಂದೀಶನೋಲಗದೊಳಗೆಭಕ್ತಿಯಿಂದಿರುತಿರ್ದರು॥೧೯॥
ಬಳಿಕಾತ್ರಿಶೂಲಿಕುಲಿಶಮಾರ್ಗಯೂರಾಸ್ಯಗೆ। ಬಲವಿರ್ಪದರುವ
ತ್ತುಪದ್ಮಮೋರೋರ್ವಗೆ। ಕೆಲದೊಳಂತಷ್ಟವಸುಗಳು ನವಗ್ರಹರು
ಮೇಕಾದಶಮಹಾರುದ್ರರು॥ ತೊಳಪಬಾದಸರವಿಗಳಾಚತುರ್ದಶ
ಮನುಗ। ಳೊಲವಿನಿಂದೆಕ್ಕೆಕ್ಕಯಿಂಕೋಟಿಕೋಟಿಕಂ। ಗೊಳಿಸಲೀ
ಶ್ವರಮಹಾಸ್ಥಾನಮಂಬಣ್ಣಿಸಲ್ಕಣಿಪಂಗೆಸಾಧ್ಯಮಲ್ತು॥೨೦॥ ಆಹರಿ
ಸಮಿಾಪದೋಳ್ವಜ್ರಾಯುಧತ್ತೊರ್ಗಳಪ। ಸಾಹಸ್ರಲೋಚನರುಹಸ್ತಿ
ವಾಹನರಾಸು। ಧಾಪಾರಿಗಳ್ವಿಭವಯುತರಿಂದ್ರಕೋಟಿಗಳ್ಕಂಗೆಸೆಯ
ಲಾಕೆಲದೊಳು॥ ಊಹಿಸಲ್ತ್ರಿಖಿಕಾಲನಿರುತಿವರುಣಸಮಿಾರ। ರಾಹ
ದಸಖೇಶಾನರೆಂಬದಿಕ್ಪಾಲಸಂ। ದೋಹಮಿಪ್ಪರ್ದುಕೋಟಿಕೋಟಿ
ಗಳಗಣನೆಯಿಂದೇನೆಂಬೆನಚ್ಚರಿಯನು॥೨೧॥ ಸುರನರೋರಗರಸುರ
ಸಿದ್ಧವಿದ್ಯಾಧರ। ಗರುಡಗಂಧರ್ವಕಿಂನರಗುಹ್ಯಕಾಳಿಕಿಂ। ಪುರು
ಷಪಿಶಾಚರಪ್ಸರಸರ್ಗಳೊಗ್ಗಿನಿಂಕೋಟಿಕೋಟಿಗಳೆಸೆಯಲು॥ ಗಿರಿ
ಗಳೋಳ್ತರುಗಳೋಳ್ಮೃಗಪಕ್ಷಿಜಾತಿಯೋಳ್ಪರಿಪರಿಯ ಜೀವಜಾ
ಲಂಗಳೋಳ್ಮುಖ್ಯಮು। ಪ್ಪುರಸುಗಳ್ಕೋಟಿಕೋಟಿಗಳೊಪ್ಪುತಿರ್ದ್ದ

ಬಾಲವೀವಮಂದಿನಮುನಿಯ । ಪುತ್ರನೇಪಾಪಪ್ರಣ್ಯವಿಚಾರಕನೆಗ-
ಳ್ವಿ। ರಾತ್ರಿಚರನೇಪಾದುತಾಧಾರನೆನೆಶಿವಂವೈಭವದೊಳಿರುತ್ತಿರ್ದ-
ನು॥೩೯॥ ವಸ್ತ್ರಂರುತುಮಾಸನಕ್ಷತ್ರತಿಥಿಗಳ್ಗೆ। ಗಸ್ತನುಯವುರಿದು ನಾ-
ನಾಜೀವಿಗಳಿಗೆಸಂ। ಪತ್ತಾಖ್ಯವುಪ್ಪಂತೆ ಸಕಲಫಲಮಂಪೈರನಿಕ್ಕುವ
ಮಹಾಪ್ರಜೆಗಳು । ಸತ್ಸನಾಕಿರಣನುಂಜೀನೂತತತಿಯುಂ ವಿ। ಯ
ತ್ತಿಂಥುಗಳ್ತ್ಕ್ಪಲಂಗಳಂ ರಕ್ಷಿಸುವ ರುಸ್ತನದೊಳ್ತಾ ಲೋಕಪಾಲರೆಲ್ಲ-
ರ್ತ್ತಣ ನಗಾರರೀಶಂಗೆಂದನು॥೪೦॥ ದಿಗ್ಗಜಂಗಳ್ ನೆರವಿಯುಕ್ಷ್ತ್ರಕ್ರಮಾಳಿ-
ಗಳ್। ಮೊಗ್ಗರಂಪಷ್ಪಕಾರೂಢಸುರಪಟುಭಟರ ಬಗ್ಗಿಕಿನ್ನರಸುರ
ನರೋರಗಪದಾತಿಗಳ್ಬ ತುರಂಗಬಲವಾಗಲು॥ ಸಗ್ಗವೆಸ್ಟ್ರೆ ಸವಬಿಲಾಪ್ಪ
ಶುಪತವುಂಬುಸ । ವ್ಯಗ್ರೋಷನಾಗುತ್ರಿಶೂಲಪಾಯುಧನೆನ।
ಟ್ಬಗ್ಗದೊವಲುಡೆಯನೀರೇಳ್ಬುವನದೊಡೆಯ ನೆನದಂರಾಜವಿಭವ-
ದಿಂದಂ॥೪೧॥ ಸಪಿರ್ದರ್ಧೀಕ್ಷದುಗ್ಧಕ್ಷಾರಸಾಧಿರ್ಗ । ಳ್ದಿರ್ಪ್ಪಕಧ್ವಂಸಿ-
ಯುಗ್ರಾಣದಗ್ರಜಂಗಳೆನೆ । ತೊರ್ಪ್ಪನಾಗ್ವೀಪಂಗಳೇವ್ಯಜಳಿಯಬ-
ಯಬಾಹ್ಯದುಜಲವಾಧಿನರನ॥ ಕೂರ್ಪ್ಪಕ್ರೀಡಾಸುಸಿರೋಜಣಾ-
ದ್ರಿಯೆರತ್ನ। ಮಿರ್ಪ್ಪಭಂಡಾರಮಾಸುರಧೇನುಸಂಚಯಂ, ಸರ್ಪ್ಪಭೂಷ-
ಣನತುರುಪಟ್ಟಿಯನೆಚನ್ನಾಗುಗರಸುತ ವಮಂಬಿತನ॥೪೨॥ ಅಷ್ಟ-
ಮದವುಬಿತಸಪ್ತವ್ಯಸನವುಂಮಹಾ । ದುಷ್ಟಷಡ್ವರ್ಗಮುಂಪಂ-
ಚೇಂದ್ರಿಯಂಗಳ್ಬ । ತುಷ್ಟಯುಮುಕರಣವಿಷಜಾಚಜೋರದುಪರ್-
ನಮಿವರಕೂಡಿಕೊಂಡು ॥ ಕಷ್ಟಮುಂಮಾಳ್ಪಜಗಜ್ಜತ್ರಮುನಸಿಜ।
ಭ್ರಷ್ಟನವನಂಗಲ್ವ ಸ್ತ್ರೀಲುಕ್ಯವತತ್ಸಸಂ ನಿಷ್ಟ ಕಲ್ಗಗ್ಳಕಂಗಳೊಳ್ಪ್ರ-
ವರ್ತಿಸದೆಶಿಸರಸುಗೆಯ್ಯುತ್ತಿರ್ದನು॥೪೩॥ ಈರಾಜವಿಭವಂಗಳಂ
ತಾನೆಧರಿಸಿಮು। ತ್ತಾರಾಜವೇಜುಂಸಕಲಬ್ರಹ್ಮಾಂಡದೊಳು। ರಾ-
ರಾಜಿಪಖಿಳ ಲೋಕಂಗಳೊಳ್ಬರಿಪನಾನಾಪುರುಷ ನಿಕರಂಗಳಂ।
ಸ್ತ್ರೀರಾಜಿಯುಂನಿಖಿಳತರುಲತಾತತಿಗಳಂ। ಗೋರಾಜಿಮುಖ್ಯಪಶು-
ವರ್ಗಂಗಳಂಪಾಲಿ। ಪಾರಾಜರಂಬೇರೆಬೇರೆ ನಿಯಮಿಸಿಯುವರಸೋ-
ಲ್ಪಿಸಿಕೊಳುತಿರ್ದನು ॥೪೪॥ ಇಂತೆಸವಚನ್ನಬಸವೇಶ್ವರಪುರಾಣ-
ಮಂ। ಸಂತಸಬಿಬರಗವರ್ಗೀಬಿಡಗರ್ಗಫರ್ಮಾ। ಸ್ವಂತಮಂಬಿಡದೆ ಪೇ-
ಳ್ವಗೆ ಪಠಿಸಿದವರ್ಗೆಭಕ್ತಿಯಂಕೇಳ್ದವರ್ಗೆ॥ ಸಂತತಂಸಕಲಸುಖ-
ಮಂಸಕಲಭೋಗಮುಮ। ಸಂತತಸೌಭಾಗ್ಯಮಂಕೊಟ್ಟುರಕ್ಷಿಸುವನಾ।
ಕಂತುಹರನೆಪರಾವತಾರನೆನಿಸುವಚನ್ನಬಸವೇಶನಳ್ಕರಿಂದಂ॥೪೫॥

ಮೂರನೆಯ ಕಾಂಡದಲ್ಲಿ ೬ನೇ ಸಂಧಿ ಮುಗಿಯಿತು

## ೩ನೇಸಂಧಿ.

ಸೂಚನೆ॥ ದಕ್ಷನೀಶ್ವರನಿಂದುದಾಸೀನನಾಗಿಕವು । ಲಾಕ್ಷಾದಿಗಳ್ವೆರಸಿಯಾಗಮಂಮಾಡುತಿರೆ । ದಕ್ಷಸುತೆ ಬಂದು ಪತಿಸಿಂದೆಯಂಕೇಳಿಯೋಗಾಗ್ನಿಗಿತ್ತಳುತನುವನು॥

ಪದ॥ ಸಾರಗುಣಗಣಸುರೋದ್ಧಾರಸತ್ಕೀರ್ತಿವಿ । ಸ್ತಾರಯುಳದಕ್ಷಸಂಹಾರಮಂದರತಟವಿ । ಹಾರಸನ್ಮೋಹನಾಕಾರನಾನಾಸ್ತ್ರಚಯಧಾರಕಾರುಣ್ಯಪೂರ॥ ಮಾರಘನದರ್ಪಾಂಧಕಾರಪರಿಹಾರವರ । ಸೂರಬೊಮ್ಮಾಂಡದಾಧಾರಪಂಪಾಪುರಾ । ಗಾರಪಾಲಿಸುನತರನೋರಂತೆವರವಿರೂಪಾಕ್ಷಘೋರಾಘಶಿಕ್ಷ॥೧॥ ಎಲೆಸಿಗ್ಧರಾಮೇಶಕೇಳ್ದಕ್ಷನಂದುತಂ । ನಳಿಯಂದಿರಮ್ಮಕ್ಕಳಂನೋಳ್ಪೆನೆಂದುಮನ । ದೊಲವಿನಿಂದವರವರಪಟ್ಟಣಕೆನಡೆತರಲುಕೇಳುತತಿಸಂಭ್ರಮದೊಳು॥ ಪೊಳಲುಗಳಸಿಂಗರಿಸಿಕಳಸಕನ್ನಡಿವಿಡಿದ । ಲಲನೆಯರುಸಹಿತಸಂಭ್ರಮದಿಂದಿದಿರ್ಗೊಂಡು । ನಿಳಯಮಂಪೊಗಿಸಿಸಿಂಹಾಸನದೊಳಿರಿಸಿಪೂಜಿಸಿದರತಿಭಕ್ತಿಯಿಂದಂ॥೨॥ ಬರವನಾಲಿಸುತುಬ್ಬಿಪರಿತೋಷಜಲವಾಗ । ಳೆರಡುಕಣ್ಗೊನೆಯೊಳೊಸರಿದಿರ್ಕೈದಿವಂದಿಸಿದ । ವರತನೂಭವೆಯುರಂಸೆಳೆದುಬಿಗಿಯಪ್ಪಿತಂದಖಿಳವಸ್ತುಗಳನಿತ್ತು॥ ಕರುಣದಿಂದವಳವರಮನೆಗಳೊಳ್ಕೆಲದಿವಸ । ಮಿರುತಿರುತ್ತಳಿಯರಿತ್ತುಡುಗೊರೆಗಳಂಕೊಂಡು । ಪರಮಸಂತೋಷದಿಂನೆನೆದನಾದಕ್ಷನೆದೆಯೊಳಗೊಂದುಯೋಚನೆಯನು॥೩॥ ಏನೆಂಬೆನೀಯಳಿಯರೀಮಕ್ಕಳಿಂದೆನಾ । ನಾನಂದಮಂಪಡೆದೆನಿಂನೋರ್ವಸುತೆಮಹಾ । ಮಾನಿನಿಮಹಾದೇವನರ್ಧಾಂಗಿಯಾಗಿರ್ಪಳವರಬಳಿಗಂಪೋಗಲು ॥ ನಾನಾವಿಧೋಪಚಾರಂಮಾಡಬಿರರೆಂದು । ಸಾನುರಾಗದೆದಕ್ಷನಾಕ್ಷಣಂನಡೆತಂದ । ನೂನಸೌಭಾಗ್ಯಲಕ್ಷ್ಮೀನಿಕೇತನಪೆನಿಪಶಿವಲೋಕಮಂಕಂಡನು ॥೪॥ ಸಕಲಸುಕೃತಂಗಳಬೆಳೆಯಪೊಸಕೊಟಾರವೋ । ಸಕಲನಿಗಮಾಗಮಪುರಾಣಾರ್ಥದಾಲಯವೊ । ಸಕಲಯೋಗಾನಂದಸಂದೋಹದಾಗರವೊ ಸಕಲಪುಣ್ಯದಸದನವೊ॥ ಸಕಲಮುನಿನಾಥರತಪಃಫಲದನೆಲವನೆಯೊ । ಸಕಲತಾರಾಗ್ರಹಾಗ್ನಿಗಳತೇಜೋಗೃಹವೊ । ಸಕಲನಿಷ್ಕಲತತ್ವದರಮನೆಯೊಯೆನಿಸವಶಿವಲೋಕಮಂಪೊಕ್ಕನು॥೫॥ ಬಿಳಿಯಾನೆಗಳಪಂತಿತಗರಸುಂದಣಕೋಣ । ಗಳನೆರವಿನಿರುತಿವಾಹನರವ್ಯಂದಂನೆಗ । ಳ್ಗಳಸಾಲ್ಕುರಂಗಸಮುದಯಮಶ್ವರಾಜವೃಷಭಪ್ರಪುಷ್ಪಕಾಳಿ ॥ ಪೊಳವಂಚೆವಿಂಡುಗರುಡೋತ್ಕರಂಪುರಬಹು ।

ವರ್ಗಳೆಯುದೊಳಗೆಲ್ಲಿಯುಂ ತ್ರೀವಿಶಲ್ಯಂಕಾಣುತಂ। ಸಳಿಯನ್ಯೈಶ್ವರ್ಯಮಂ
ಪೊಗಳುತಾದಕ್ಷನಾಶ್ಚರ್ಯಮಾನಸನಾದನು ॥೬॥ ಎಲ್ಲೆಲ್ಲಿ ನೋಡಲ್ಲೈ
ವೋಗಹತ್ತುತ್ತೋಳಿನವ। ರೆಲ್ಲೆಲ್ಲಿ ನೋಡಲುರವರೆದಳೆದಜಡೆಗಳೆಯು॥
ರೆಲ್ಲೆಲ್ಲಿ ನೋಡಲುರಿಯಂಪಣೆಯೊಳಿಟ್ಟಜಕಪಾಲಮಂಪಿಡಿದಸೆವರು॥
ಎಲ್ಲೆಲ್ಲಿ ನೋಡಲಾನೆಯತೊಗಲಿನುಡಿಗೆಯವ । ರೆಲ್ಲೆಲ್ಲಿ ನೋಡಲುರು
ಕಟಕಕಂಡೆಲಧಾರ। ರೆಲ್ಲೆಲ್ಲಿ ನೋಡಲರೆ ವೃವೆಣ್ಣರೆಸದಿರ್ದರಾಪುರ
ದೊಳೇನೆಂಬೆನು॥೭॥ ಸಾರೂಪ್ಯಗಣವರಘನತರದಸಂಪದದವಿ। ಸ್ತಾರ
ಮಂನೋಡುತ್ತ ಬರೆಕಾಣಿಸಿತು ಶಿವಾ। ಗಾರಂವಿಮಲಮೋಕ್ಷಲಕ್ಷ್ಮಿ
ಯಾನನಸರೋರುಹದಂತೆರಮ್ಯವಾಗಿ॥ ದ್ವಾರದಬಹಿರ್ಭಾಗದೋ
ಳ್ಪಮುಯಮಂಪಡೆಯು । ತೋರಣಸಿನಿಂದವುಸುಮುನಿಗಳನಿರೀಕ್ಷಿ
ಸು । ತ್ತೋರಂತೆದಾಕ್ಷಾಯುಣೀಪಿತಂ ಪುಷ್ಪಕವನಿಳಿದುಬಡೆದೊಳ
ಕ್ಕೊಕ್ಕನು॥೮॥ ಕಡೆದರಿಲ್ಲಂತರಂತೆರದಬಾಗಿಲೊಳಿವಂ। ಮೃಡನರಸಿ
ಯುಯ್ಯೆಂದರಿದುಸಂತಸದಿಂದೆ। ನಡೆದುಬರೆಬರೆಮುಂದೆಕಾಣಿಸಿ
ತ್ತೋಲಗದಶಾಲೆಕಡುರಮ್ಯವಾಗಿ॥ ಇಡಿದಿರ್ದವೇದವೇದಾಂತಮಂ
ತ್ರಂಗಳು। ಗ್ಗಡಣೆಯುಮುಪಾಪ್ರಣವದಂತೆ ಹರಿಮೊದಲಾದ। ಬಿಡುಗಣ್ಣ
ರೋಲಗದನಡುವೆ ಬಸವೇತ್ತು ದೇವರದೇವನಿರೆಕಂಡನು॥೯॥ ಸಿದ್ಧರಂ
ಮೋಕ್ಷಕೇಳಿಭವನೋಲಗಶಾಲೆ। ಯುದ್ಧಶತಲಕ್ಷಯೋಜನದಗಲವನಿ
ತುಪ್ರ। ಸಿದ್ಧವಲ್ಲಿನಕೋಟಿಶಶಿಕೋಟಿಯುಂ ಶಿವಂಬಿತ್ತಾನುರಾಗದಿಂ
ದ॥ ಉದ್ಧರಿಸಿದಂತನ್ಮಹಾಸಭಾಚಕ್ರಮಂ। ಬುದ್ಧಿಗರಿದುಸುರಲನಿ
ತಗಲದೊಳಗೆಡೆವಿಡದೆ। ಬದ್ಧಾಂಜಲಿಪ್ರಘಟ್ಟನಮುಕುಟತಟರಾಗಿಸು
ರಗಣಂನಿಂದಿರ್ದುದು॥೧೦॥ ಸಿರಿಯಸೌಭಾಗ್ಯಮಾಸವಸತಿಯುಜಾಣ್ಮೆ
ಯುಂ। ಸುರನದಿಯುನ್ನೈರ್ಮಲ್ಯಮಾಶಚಿಯವೈಭವಂ । ವರಮಂತ್ರ
ದೇವಿಯರನಿಜಶಕ್ತಿರೋಹಿಣಿಯ ಸರಸತರಲಾವಣ್ಯಮುಂ ॥ ಧರೆ
ಯುಸ್ಥೈರಣೆಮಾತೃಕೆಯರಸಾಮರ್ಥ್ಯಮುಂ । ಪರಮಮೋಕ್ಷಾಂಗ
ನೆಯಸೌಖ್ಯಮುಂ ಪಾರ್ವತಿಯ। ಚರಣಪಂಕಜದಮಾಂಗಲ್ಯತೆಯ
ನೋಲಗಿಸಿನಿಂದಿರ್ದವೇವೇಳ್ವೆನು ॥೧೧॥ ತುಂಬುರನನಾರದನಗಾ
ನವೀಣಾಕ್ವಣಂ । ಕಂಬಳಾಶ್ವತರಗೀತಂಕಿವಿಮೊಳಿಡಿಯೆಲೋ।
ಕಾಂಬಿಕೆಯುವದನಮಂನೋಡಿ ನಸುನಗುತೆ ಭೃಂಗಿಯುನರ್ತನಕಮೆ
ಚ್ಚುತ॥ ಅಂಬುಜೋದರಕಮಲಸಂಭವರಬಿನ್ನಪಗ। ಳಂಬಹಳಕರು
ಣಾಟಂಕೇಳಿಮಂನಿಸುತೆತಿರಿ । ಯಂಬಕಂಸಿಂಹಪೀಠಾಗ್ರದೋಳ್ಕು
ಳ್ಳಿದುರ್ದರಂಜಿಸಿದನೋಲಗದೊಳು॥೧೨॥ ನಿಂದುಬಿನ್ನವಿಸುಹರಿಯು

ಜಕಳೆಕಳೆವಮಾಣ್ಬ । ರಂದಲಕಡೆಗೆಸಾರ್ದನೇಕ ಸುಳಿಯುಬಿರಿಲ್ಲಿ
ಮಂದಸಗ್ರಜಕೆಲಕೊಕ್ತ್ರಿನೀಶ್ವರುಣವಸ್ಕುರುದ್ರರೆಡಬಲಕೆತೊಲಗಿ॥
ಬೃಂದಾರಕಸ್ತ್ರೀಯರಾರತಿಯನೆತ್ತಿಮುನಿ। ಬೃಂದಪುಷ್ಪಾಂಜಲಿಯ
ಸೂಸಿಚರಣದೊಳೆಸುತ । ನಂದಿಯುಂಮಹಾಕಾಳನುಂಭರಾಭರಿಯು
ಮಾಡುತಿರ್ದರೋಲಗದೊಳು ॥೧೩॥ ಹರಿನೇತ್ರಕಮಲಸಂಪೂಜಿ
ತಪದಾಂಭೋಜ। ಹರಿಯನೆಡಗಾಳೊಳೊದೆದಡಗೆಡಹಿದಪ್ರತಿಮ।
ಹರಿಹರಿಗಳಗ್ನಿನಯನತ್ರಯಂಗಳಮಾಡಿಜಸವನಾಂತೆಸವಮಹಿಮ
ಹರಿಕಟಕಕುಂಡಲೋದ್ಭಾಸಿತಕರಗ್ರಮಣ । ಹರಿವರ್ಣಹರಿರೂಪಹ
ರಿಮುಖ್ಯಸುರಸೇವ್ಯ। ಹರಹರನಪಿತನೆಜಯಜಯುಎಂದುವಂದಿಗಳು
ಕೊಂಡಾಡುತಿರಲತ್ತಲು ॥೧೪॥ ಬಾಗಿಲೊಳು ಸ್ವಗಲೀಯದ್ವಾದಿರೆತದು
ಬಿನಿಂದಶತ। ಯಾಗರಂಬಿನ್ನಪಕೆಸಮಯವಿಲ್ಲದೆನಿಂದು ಮೂಗುವಟ್ಟಿ
ದರ್ನಾನಾಲೋಕಪಾಲರಂಕಾಣುತೆಂದಕ್ಷನಂದು॥ ಭಾಗೀರಥೀಧವ
ನಪರಮವಿಭವದಸಭಾ। ಸಾಗರದಕಡೆಯಕೋಹಿನಕೊಳ್ಗೆಯೊಳು
ನಿಂದು । ತೂಗಿಗಂಮುಕುಟವಂತನ್ನನುಡಿಸದಮಗಳನಳಿಯುಸಂ
ನೋಡಿನೋಡಿ ॥೧೫ ।ಐಶ್ವರ್ಯಮದದಿಂದಲೆನ್ನಪಂಮರೆದನ। ಕ್ಷೀ
ಶ್ವರಂತಾಂಪಡೆದಮಗಳಾಂದುಬಗೆಯುದೇ। ನೈಶ್ವರ್ಯದಿಂದೆಮಂನಿಸ
ದಾದಳೈಸೆಸಾಕಿನ್ನಿವರಸಿರಿಯನಿರದೆ॥ ವೈಶ್ವಾನರಂಗೀವುಗಕ್ಕೀನು
ಪಾಯವೊಂ। ದಶ್ವಮೇಧವಮಾಡಿನೋಡುವೆಂತಾನೆನುತ। ವಿಶ್ವೇ
ಶನಂಜರವುತಾದಕ್ಷನೈದಿದಂನಿಜಪುರಕೆಮಹಾಬಲದಿಂದಂ॥೧೬॥ ಪೊಕ್ಕ
ನರಮನೆಯನೇಕಾಂತದಾಲೋಚನೆಗೆ। ತಕ್ಕರಂಕರೆಸಿಗಂಮಂತ್ರಿಗ
ಳನವರೊಡನೆ । ಮುಕ್ಕಣ್ಣನಿಂದೆತನಗಾದುದಾಸೀನಮಂವಿಸ್ತಾರ
ಮಾಗಿಪೇಳ್ದಂ॥ ಅಕ್ಕಟಾಕಂಡಿರೇಗೊರಮಂಗೆಮಗಳಿತ್ತು । ದಕ್ಕ
ದಸ್ತುಫಲಮಾದೊಡೇನಾದುದಿಂನವನ। ಸೊಕ್ಕನೀಗಲನಿಪೆನೆಂದು
ದಕ್ಷಂತನ್ನಪಿತನೆಡೆಗೆನಡೆತಂದನು ॥೧೭॥ ಕಂಡುಬಿನ್ನವಿಸಿದಂಬೊ
ಮ್ಮಂಗೆಸುರಮುಕುಟ। ಮಂಡಿತಪದಾಬ್ಜಕೀಕ್ಷೀನೆನ್ನಕುವರಿಯಂ।
ಮಂಡೆಯೊಳುಜಡೆಗಟ್ಟಿನೈಗೆಬೂದಿಯುತೊಡದಗೊರಮಂಗೆಕೊಟ್ಟ
ಬಳಿಕ॥ ಕಂಡೊಮ್ಮೆಬಪ್ಪನೆಂದೈವಲೆಂನಂಪೆಸ, ಗೊಂಡನೇನುಡಿ
ಸಿದನೆಕುಳ್ಳಿರೆಂದನೆಪಿಂತೆ । ಕಂಡುಬಲ್ಲಿರೆಮಗಳನಿತ್ತವರ್ಗೀವಿಧಿ
ಯುನೆಂದುದಕ್ಷಂಸುಯ್ದನು ॥೧೮॥ ತಂಸಂತ್ರಿರಸ್ಕರಿಸಿದವನನಾಪರಿ
ಮಾಳ್ಪ। ದುಷ್ಕೃತಮದಲ್ಲದೊಡೆ ಸೃಷ್ಟಿಯೊಡತನದಿಂದ। ಮಿನ್ನೀ
ತಗ್ಗಳಿಕೆತಂದೆಕೊಡು ತಪಕನುಜ್ಞೆಯುನೆಂದುನಿಂದಿರಲ್ಕನಿನ್ನೆನ್ನ॥

ಚಾಯ ಹವಣನಱುತ್ತು ಪರಿಗಿದಂ । ಬಿನ್ನವಿಸಿನೋೞ್ಪೆನೆಂದತ್ಯಧಿಕ
ಚಿಂತೆಯಿಂ । ಪನ್ನಗಾರಿಧ್ವಜನಬಳಿಗೆ ದಕ್ಷಂಗೂಡಿ ಕಮಲಜಂ ನಡೆ
ತಂದನು ॥೧೯॥ ಕಮಲಜಂ ಬಂದು ಬಿನ್ನವಿಸಿದಂ ಹರಿಗಾಗ । ಳುಮೆ
ಯರಸನಿಂದೆ ದಕ್ಷಂಗಾದವಸ್ಥೆಯಂ । ಕ್ರಮದಿಂದ ಹಯಮೇಧಮಂ ರ
ಚಿಸಿ ನಿಮಗಗ್ರಪೂಜೆಯಂ ಕೊಟ್ಟಬಳಿಕ ॥ ಕುಮತಿಯಾ ರುದ್ರನಂ ಕ್ಷು
ದ್ರನೆಂದೆನಿಸಿ ಸುರ । ಸಮಿತಿಯೊಳು ಹವ್ಯಕವ್ಯಕೆ ಹೊರಗು ಮಾೞ್ಪೆ
ನೆಂ । ದಮಿತಕೋಪದೊಳೆನ್ನ ಕರತಂದನೆನೆ ಕೇಳಿ ಕಮಲಾಕ್ಷನಿಂತೆಂ
ದನು ॥೨೦॥ ಶಿವಶಿವಾ ಸಕಲಯಜ್ಞಾದಿಕರ್ಮಂಗಳಿಗೆ । ಶಿವನೊಡೆಯನಾ
ತನಂ ಬಿಟ್ಟೆನಗೆ ಸಕಲಸುರ । ನಿವಹದೊಳಗಗ್ರಪೂಜೆಯನಿತ್ತು ಯಾ
ಗವಂ ಮಾೞ್ಪೆನೆಂಬುದು ನೀತಿಯೆ ॥ ಶಿವನೆ ಕೇಳಖಿಳಲೋಕಾರಾಧ್ಯ
ನಾತನೇ । ವಿವರಿಸಲ್ಕೆಮಗೊಡೆಯನೆಂದೆನಲ್ಕಮಲಸಂ । ಭವನೆಂದ
ನಿಮ್ಮಮರೆವೈಕ್ಷರಂ ಹಾಯಬೇಕೆನಲಚ್ಯುತಂ ನುಡಿದನು ॥೨೧॥
ಆದೊಡಾಗಲಿ ಬಂದುದಂ ಕಾಣ್ಬೆವಿದರಿಂದೆ । ಮಹಾದೇವನೆಮಗೆ ಮುನಿ
ಯದೆ ಬಿಡಂ ಪೋಗಿ ಸಂ । ಪಾದಿಸುವುದುಗ್ರವ್ಯವಂ ಬರ್ಪೆವಾವೆಂದವ
ಗೞೆಂ ಕಳುಪಿ ಬಳಿಕ ॥ ಎಬ್ಬಿದಂ ಸಕಲಚತುರಂಗಮಂ ಕೂಡಿಕೊಂ ।
ಡಾದಕ್ಷನೆಡೆಗೆ ಕಮಲೋದರಂ ದಕ್ಷನಿಂ । ಬಾದರಹಿಮಗಿರಿಯ ಗಂಗಾ
ದ್ವಾರದೊಳು ಯಜ್ಞಶಾಲೆಯಂ ಮಾಡಿಸಿದನು ॥೨೨॥ ಕರಿಸಿದಂ ಮ
ನುಗಳಂ ಮುನಿಗಳಂ ನೃಪರಂ । ಬರಿಸಿದಂ ವಸುಗಳಂ ಋಷಿಗಳಂ ಸ್ತ್ರಿ
ದಶರಂ । ಪರಿಸಿದಂ ಸವನಾಧಿಪತ್ಯಕ್ಕೆ ಮಿಕ್ಕ ನಿಜರಂ ಹಕ್ಕಿಗಬ್ಜಾಕ್ಷನಂ ॥
ಪರಿಸಿದಂ ಸಕಲಭೂಮಂಡಲಕೆ ತುರಗಮಂ । ತರಿಸಿದಂ ಸಕಲಲೋಕ
ದ ವಿವಿಧವಸ್ತುಗಳ । ನಿರಿಸಿದಂ ಬ್ರಸ್ತುತ್ಯಕಷ್ಟಭವನಂ ಯಜ್ಞದೀಕ್ಷೆಯಂ
ತಾಂ ತಳೆದನು ॥೨೩॥ ಚರುಪುರೋಡಾಶಂಗಳಿಂ ತಿಲವ್ರೀಹಿಗಳ । ನೆರ
ವಿಯಿಂ ಪೃಷದಾಜ್ಯಮಧುಕುಶಸ್ತಂಡುಲೋ । ತ್ಕರದಿಂದೆ ಬರ್ಹಿಗಳ
ಹೊರೆಗಳಿಂ ಸ್ರುಕ್ಸ್ರುವಾದಿಗಳ ಸಂದೋಹಬಂದಂ ॥ ಧರಣಿಯಮರರ
ವೇದಮಂತ್ರಘೋಷಂಗಳಿಂ । ನಿರುಪಮಾಹವನೀಯ ಪರಮಗಾರು
ಹಪತ್ಯ । ವರದಕ್ಷಿಣಾಗ್ನಿಗಳ ಬೆಳಗಿನಿಂ ದಕ್ಷನಧ್ವರಶಾಲೆ ಕಣ್ಗೆಸೆದು
ದು ॥೨೪॥ ಆ ಕ್ಷಣಂ ಬಂದಂ ದಧೀಚಿಮುನಿ ಮಂಟಪದೊ । ಳೀಕ್ಷಿಸಿದನಾ
ಚಂದ್ರಚೂಡನಂ ಕಾಣದೆಪು । ನಕ್ಷೋಭನಾಗಿ ಸ್ಮರಿಸಿ ತಂನೊಳಾಯ
ಜ್ಞದೀಕ್ಷಿತನ ಮುಂದೆ ನಿಂದು ॥ ದಕ್ಷ ಕೇಳ್ ಮಹಾದೇವನಿಲ್ಲದೆ ಯಜ್ಞ ।
ಮೇ ಕ್ಷೀಣವೆಂಬುದಂ ತಿಳಿದು ತೊಡಗು ಮರೆಪ । ತ್ಯಕ್ಷವಿಮಾ ವೇದಂಗ
ಳಂ ಕೇಳ್ವುದೆನೆ ನಿಜಾಕಾರದಿಂ ಶ್ರುತಿ ನುಡಿದವು ॥೨೫॥ ಯಾಗಕರ್ತೃಂ ಶಿ

ವಂಶಿವನಿಲ್ಲದೀದುಷ್ಟ । ಯಾಗವೇಸರ್ವ್ವಥಾಕೆಡುಗುಪೆಂಡುಸುರಿಬ
ಯ । ಲಾಗಲಾಶಿವನಿಂದೆಯುಂಮಾಳ್ಪದಕ್ಷನಂಕಂಡುಮುನಿಕೋಪ
ದಿಂದಂ॥ ಈಗಳೀಶಿವರಹಿತಯಾಗಕ್ಕೈತಂದರ್ಗೆ। ಬೇಗಂಶಿವಜ್ಞಾನಮು
ೞಿಗೆಂದುಶಪಿಸಿಮುನಿ । ಪೋಗಲ್ಕನಂತಮುನಿಗಳ್ಪೊದರಿತ್ತಲೀಯಾ
ಗಂನಡವುತಿರ್ದುದು॥೨೬॥ ಪ್ರತ್ಯಕ್ಷಮಾಗಿದಿವಿಜರ್ತ್ತಂಮಹಸುಗೆಗ
ಳ। ನತ್ಯಂತಹರುಷದಿಂನಡೆತಂದುಕೊಂಬುದಂ। ಪ್ರತ್ಯಕ್ಷಮಾಗಿಹರಿ
ಕಮಲಜರ್ಸವನರಕ್ಷಕರಾಗಿಕಾದಿರ್ಪ್ಪುದಂ॥ ಪ್ರತ್ಯೂಹರನಂನಿಂದಿ
ಸುತ್ತದಕ್ಷಂಮಾಳ್ಪ । ಕೃತ್ಯಮಂಕಂಡುನಾರದನಖಿಳ ಮುನಿಜನ।
ಸ್ತುತ್ಯನೆಡೆಗೈದಿಬಿನ್ನವಿಸಿದಂಕ್ರತುಕ ಮುಖದಾದ್ಯಂತ ಸಂಗತಿಯ
ನು॥೨೭॥ ಆಲಿಸಿದಳುಮತನ್ನಪಿತನದೂರಂಮನಕೆ। ತಾೞಿಕಡುದು
ಗುಡಮಂಹರನಡಿಗೆಮಣಿದುಮಖಶಾಲೆಗಾಂಪೋಗಿಪಿತನಜ್ಞಾನಮಂ
ತಿೞಿಪೆನೆಂದುಶಿವೆಬಿನ್ನವಿಸಲು ॥ ಕೇಳಬಲ್ಲನೆನಿನ್ನಮಾತನಾದಕ್ಷಂ
ಕ। ರಾಳಮತಿಬೇಡಬೇಡಬಲೆಪರಿಭವಮಹುದು । ಕೇಳೆಮ್ಮಮಾ
ತನೆನೆಮತ್ತೆಮ್ಯಯಿಕ್ಕಿದಾಕ್ಷಾಯಣೀಶಿವಗೆಂದಳು॥೨೮॥ ತಂದೆಯಿ
ದ್ದೆಡೆಗೆಮಗಳ್ಪೈದಲ್ಕೆಪರಿಭವಂ। ಬಂದಪುದೆಸರ್ವ್ವಥಾಬಾರದೆಂತಾದೊ
ಡಂ। ಮಂದಮತಿಯಾದಪಿತನಂತಿೞಿಪಿಬರ್ಪೆನೆನೆಪೋಗಾದೊಡಾತ
ನಿಂದ॥ ಮುಂದಪ್ಪುದಂಕಾಣ್ಬೆನಿಂನೆಂದುದೇವಿಯುಂ। ನಂದಿಮುಖ್ಯಾ
ಮರಗಣಂಗಳಂಕೂಡಿಕೊ। ಟ್ಟಿಂದುಜೂಟಂಕಳುಪಲತಿವೇಗದಿಂಪಿತ
ನಯಜ್ಞಕ್ಕೆಬರುತಿರ್ದಳು ೨೯॥ ಭರದಿಂದಮುಂದೋರ್ವ್ವಗಣನಾಯ
ಕಂಬಂದು। ತುರಗಮೇಧಾಧ್ವರದಯಾಜಮಾನ್ಯದೊಳೆಹರಿ । ಸರಸಿ
ಜಾಸನಸುರೇಂದ್ರಾದಿದಿವಿಜರನಡುವೆದೀಕ್ಷೆಯಂತಳೆದೊಪ್ಪುವ॥ ಹು
ರುಳೆದಕ್ಷನಮುಂದೆನಿಂದುದೇವರದೇವ। ನರಸಿನಿಂನಣುಗೆತವಯಾ
ಗಮಂನೋಡಲೆಂ। ದಿರದೆಬಿಜಯಂಗೈದಳೆನೆಬೊಮ್ಮಜಂಕೇಳದಂತೆ
ಗರ್ವ್ವದೊೞಿರ್ದನು॥೩೦॥ ಏಕೆನುಡಿಯದೆಸುಮ್ಮನಿರ್ಪೆಯುಕಟೀಮು
ರುಳೆ। ಲೋಕನಾಯಕನರಸಿನಿಂನಪುಣ್ಯದಫಲಮೆ। ಸಾಕಾರಮಂತ
ಳೆದುದೆಂಬಂತೆಬಂದಳಿದೆಸುಧೆಯನುೞಿದಳೆಗೆಳೆಸುವ॥ ಕಾಕರ್ಗೆಗು
ರುಮಾಗಬೇಡಿದಿಗೊರ್ಳ್ದೆಲೇಳ್ದೊ । ಕೆಯಿಂಪುರವಸಿಂಗರಿಸುವಹಲ
ದೊಳೆನಲು। ನೂಕಿವನನುತ್ತೆಘುಡುಘುಡಿಸಿಕಿಡಿಕಿಡಿಯಾಗಿದೀಕ್ಷಿ
ತಂಕೋಪಿಸಿದನು ॥೩೧॥ ಅನಿತರೊಳೆನೇಕವೈಭವದಿಂದೆಬಂದೆಸ
ವ । ಜನಕನಮಹಾಧ್ವರವನೋಡಿನುಡಿಸಿದಳಾಗ। ವಿನಯದಿಂದೆಲೆ
ಬೊಪ್ಪಸಕಲರಾಹಸ್ಯಂಗಳಂಕೇಳಿಕೇಳಿಕಂಡ್ಡು ॥ ನಿನಗಿದೇಕಜ್ಞಾನ

ಮಕಟಕಟಬೇಡಮಖವನನುಳಿದುಮಾಳ್ಪಯಜ್ಞಂಕೆಡವುದೇಮಾತ। ನನುಕರಿಸುನೀನೆಂದುಬೇಡಿಕೊಳೆಘುಡಿಘುಡಿಸಿದಕ್ಷನಂಬಿಂತೆಂದನು॥೩೨॥ ಹರಿಯನೆಂಬುಗೆಕಮಲಜನಸಹಾಯಂದಿಶಾ। ವರರೊತ್ತಿತರಣಿವಸುದನುಜಮನುಗಳಿಕಾವ। ಅರವಿಚಂದ್ರಾತ್ರಿಕಶ್ಯಪರೆನ್ನಜಾಮಾತ್ರರುಂಜಗತ್ಕರ್ತೃವೆನಗೆ॥ ತಿರುಕಂಮಸಣಗಾಹಹಾವಡಿಗನೆಲುಮಾಲೆ। ಗೊರಲಗೊರವಂನೋಡಲೆನಗೆಪಾಸಟಿಯೆನೀ। ನಿರದೆಕೆಲಸಾರೆನುತಕೋಪದಿಂಮರಳಿಮರಳೀಶನಂನಿಂದಿಸಿದನು॥೩೩॥ ಕೇಳಿಶಿವಶಿವಮಹಾದೇವಯೆಂದರ್ಕೆಲರ್ಕೇಳಿಕೇಳದವೊಲ್ಪರಾಕುಗೈದರ್ಕೆಲರ್ಕೇಳಬಾರದುಶಿವನನಿಂದೆಯನೆನುತ್ತೆದ್ದುತಂತಂಮನಿಳಯಕೊಡನೆ॥ ಹೇಳದೇಬಿಟ್ಟುಪೋದರ್ಕೆಲಬರ್ಗ್ಭಯಂ। ಪೇಳಲವಕೇಳದಿರೆಜಡಿದುಪೋದರ್ಕೆಲರ್ಪೇಳಲೇನಧ್ವರದಶಾಲೆಯೊಳಗಿರ್ದಮುನಿವರರದೇನೆಂದೆಂಬೆನು॥೩೪॥ ಇಂತಿರದೆದಕ್ಷಸತಿಕೋಪದಿಂದಾಗಳ್। ತ್ರ್ಯಂಕಶಿವನಿಂದೆಯಂಮಾಡಲಕಟಾಪ್ರಾಣ। ಕಾಂತನಿಂದೆಯನಾಲಿಸಿದೆನಿವನಸಂಬಂಧಕಾಯಮಂಬಿಡುವೆನೆನುತ॥ ತಾಂತನ್ನದೇಹಮಂಯೋಗಾಗ್ನಿಗಿತ್ತಾಗ॥ ಪಿಂತೆಮೇನೆಗೆಕೊಟ್ಟವರಕಾಗಿಪೋಗಿಸಲೆ। ಕಂತುಮದಮರ್ದನನರಾಣಿಕಲ್ಯಾಣಿಮೇನೆಯಗರ್ಭದೊಳ್ಬೆಳೆದಳು॥ ಇಂತೆಸೆವಚೆನ್ನಬಸವೇಶ್ವರಪುರಾಣಮಂ। ಸಂತಸದಿಬರೆದವರ್ಗೋದಿದವರ್ಗರ್ಥವಾ। ದ್ಯಂತಮಂಬಿಡದೆಪೇಳ್ದರ್ಗೆಪಠಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ॥ ಸಂತತಂಸಕಲಸುಖಮಂಸಕಲಭೋಗಮನ। ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ। ಕಂತುಹರನಪರಾವತಾರನೆನಿಸುವಚೆನ್ನಬಸವೇಶನಳ್ಕರಿಂದಂ ... ॥೩೬॥

೩ನೇಕಾಂಡದಲ್ಲಿ ೩ನೇಸಂಧಿ ಮುಗಿದುದು.

೪ನೇಸಂಧಿ

ಸೂಚನೆ॥ ರುದ್ರನಮಹಾಕೋಪದಿಂದುದಿಸಿಸುರಬಲಸಮು
ದ್ರಮಂಕಲಕಿಕಮಲಜಮುಖ್ಯರಂವೀರ। ಭದ್ರನತಿಕೋಪ
ಬಂಪೆದೆಗುಡಿಯಕಟ್ಟಿಭೂತಾಳಿಗಳವಳಕಿತ್ತನು

ಪದ॥ ದಕ್ಷಮಖಸಂಹಾರದಕ್ಷದುರಿತೇಭಹರ। ತ್ರ್ಯಕ್ಷಮಿತ್ರೀಭೂತಯಕ್ಷಪತಿನುತಸಹ। ಸೂಕ್ಷ್ಮವಿಧಿಪಂಕೇರುಹಾಕ್ಷವಂದಿತಪದಮಹೋಕ್ಷವಾಹನಜಯಜಯ॥ ಋಕ್ಷಪತಿಜೂಟಾನಲಾಕ್ಷಸುಲಲಾಟನತ। ರಕ್ಷಖಳಸಂಕುಲೋಪೇಕ್ಷಲೋಕಪ್ರಜಾ। ಧ್ಯಕ್ಷಪಂಪಾವಿರೂಪಾಕ್ಷ ನಿಜಭಕ್ತರಂರಕ್ಷಿಪುದಪೇಕ್ಷೆಯಿಂದಂ ॥೧॥ ಈ

ಶ್ವರಿಯ ಕಾಯಮುಳಿದಂದಮಂ ಕಂಡು ಪರ । ಮೇಶ್ವರಂಗೀ ಹದನನರುಪಬೇಕೆಂದು ನಂ । ದೀಶ್ವರನತಿತ್ವರಿತಗಮನದಿಂದೈತಂದು ಶಿವನಿದಿರೊಳೈದೆ ನಿಂದು ॥ ಶಾಶ್ವತನೆ ಕೇಳರ್ಧಾಂಗಿಯಾ ದಕ್ಷಪ್ರಜೇಶ್ವರಂ ನಿಂದಿಸಲ್ಕೇಳ್ದು ತಂನಯ ಕೋಪ । ವೈಶ್ವಾನರಂಗೆ ತುತ್ತಾಗಳೆನೆ ಕೇಳ್ದುಗ್ರನಾಗ್ರಹಂ ತಾಳ್ದಂದು ॥೨॥ ಬಿಡದೆ ಕಾಲಂಗಳೊಳ್ಪನಪರ್ವತಂಗಳಂ । ಸುಡುವವಹ್ನಿಗೆ ಗಾಳಿ ಬೇಸಗೆಯೊಳೊಡವರ । ಲ್ತುಡುವದೇನುಂಟು ಪೆಸರಿಂ ವಿಷಗ್ರೀವ ಸುಗ್ರಂ ಕಿಚ್ಚುಗಂಣನಂತು । ಕಡೆಗೆ ಸಂಹರಮೂರ್ತಿಯಾಗಿಪ್ಪವಂ ಮುಚ್ಚು । ಮಡದಿಯಳಿವುಂಪಳಿವ್ರಮಂ ಕೇಳ್ದು ಸೈರಿಪನೆ। ಕಡುಗಾಯ್ಪು ನಿಂದೆ ಘುಡುಘುಡಿಸಿ ಕಿಡಿಕಿಡಿಯಾದನೊಡನಾ ವಿರೂಪಾಕ್ಷನು ॥೩॥ ಜಾರಿದುದು ಶಾಂತಿ ಮಿಗೆ ಮೀರಿದುದು ಮುಳಿಸು ಬೇ। ರೂರಿದುದು ಕಿಡಿಸಿಡಿದು ಪಾರಿದುದು ಕಿಡಿಬೆಮರು । ತ್ತೋರಿದುದು ಪಣೆಗಿಚ್ಚು ಕಾರಿದುದು ಕಣ್ಣಾಟವಮೀರಿದುದು ಮಾಸೆಬಿಸುಪಂ ॥ ಪೇರಿದುದು ಸುಯ್ಲು ಭಯಂಬೀರಿದುದು ಮೊಗಮಿರದೆ ಏರಿದುದು ತಲೆಮಾಲೆ ಕೇರಿದುದು ಫಣಿವಿತತಿ। ಪಾರಿದುದು ಸಭೆಗಬ್ಬಯಾರಿದುದು ಜನಕೆಲಯದೋರಿದುದು ಜಗಕಂದನು ॥೪॥ ಫಳಫಳನೆ ನಕ್ಷತ್ರಮುದುರುತಿರ್ದವು ಬೆಟ್ಟು। ಛಿಟಿಛಿಟಿಲೆಂದು ಸಿಡಿವುತಿರ್ದವು ಜಳಧಿ। ತಳಮಳನೆ ಕುದಿವುತಿರ್ದವು ಧರಣಿ ಧಗಧಗೆಂದುರಿಯೆ ದಿಗ್ಗಜಫಣಿಗಳ್॥ ತಲೆತಲೆಯ ಮುತ್ತುರಸಂಗಳುಂ ಪಿಡಿದೊಡಗು। ಬಳಬಳನೆ ಸುರಿವುತಿರ್ದವು ನಿಖಿಳಲೋಕಂಗ। ಳೊಳಗೊಳಗು ಪೊರಗೆಂಬ ಭೇದವಿಲ್ಲದೆ ಹರನ ಕೋಪಾಗ್ನಿ ಸುಡುತಿರ್ದುದು ॥೫॥ ಹೋಳಾಯ್ತಜಾಂಡ ನಾಕಾದ ಸಂಚೊಡೆದಂತೆ। ಮೇಲಿಹಾವರಣಂ ಬಿಕುದಿವುತಿರ್ದುದು ಶಿಖಿಛ । ಥಳಿಸಲು ಭೂತೇಶನೀ ಜಗತ್ತಿಗಿಂದು ಮುನಿದನೋ ಕಲ್ಪಾಂತದ ॥ ಕಾಲಮಂ ಕಂಡು ಸಂಹರಿಸುವನೋ ಮೇಣ್ಮಹಾ । ಕಾಳಿಯುಳಿದುರಿಯೊಳೀ ಲೋಕಮಂ ಸುಡುವನೋ । ಪೇಳೆನೆ ಮಹಾರುದ್ರಕೋಪಾಗ್ನಿ ಸುಡುತಿರ್ದುದೇನೆಂಬೆನಚ್ಚರಿಯನು ॥ ೬ ॥ ಆಮಹಾದೇವ ಕೋಪದೊಳಜಾಂಡಕೆ ನೆಗದ । ಧೂಮಮೇ ಪೌರುಷಾಕಾರಮಾದುದೊಪಳೆಯ । ದಾಹೋಘತತಿಗಳಂ ಪೆರೆಗಳಂ ಭಗಣಂಗಳಂ ತಾಳ್ದನೀಲಾಚಳಂ ॥ ವ್ಯೋಮಕೇಶನಶ್ವಾಸಪಾಶದಿಂದಿಳಿದುದೆನೆ । ಸೊಮಳೆ ಸಹಸ್ರಾಸ್ಯದು ಸಹಸ್ರಬಾಹುವಿಂ । ದಾ ಮಹಾದಂಷ್ಟ್ರದಿಂ ತ್ರಿಸಹಸ್ರಲೋಚನದ ಭೀಮರೂಪೊಗೆದುದಂದು ॥೭॥ ಅಂತಾವಿರಾಡ್ರೂಪವೆಂಬುದೇಂ ಬ್ರಹ್ಮಾಂಡದಂತ

ವೆಶಿತಂ ವಕ್ಷದೊಳೊಪ್ಪುವಸೂತ್ರಗ । ತ್ನಂತರಣಿಶಶಿಬಿಂಬಮುಡು
ಗಣಂ ನವಕಂಠಸರವೆನಿಸುವುಗ್ರರೂಪಂ ॥ ತಾಂತಳೆದು ನಿಂದು ಶತ
ಕೋಟಿಸಿಡಿಲಾರ್ಭಟಿಸು । ವಂತೆ ಘುಡುಘುಡಿಸುತೊಲವಾಡೆ ಪದ
ಹತಿಗೆ ದಿಗ್ದಂತಿಗಳ್ ಕುಗ್ಗುತ್ತೊಲಗಾಡೆ ಧರೆ ಬೊಲದಾಡುತ್ತಿರ್ದದಟ
ನೇವೆಂಬೆನು ॥೯॥ ಎಸ್ಗೆಯಿಂತಲೆವಾಲೆಫಣಿಭೂಷಣಂಗಳಿಂ । ಬಿಸ್ಗೆ
ಮುಂ ಪಲಕಮುನ್ನಾಯುಧಂಗಳಿನಾಂತ । ತೋಳ್ಗಳಿಂ ಬುಡುಂಬುದಲೆ
ಕೆವಿನ್ಮಾಸೆ ಕೆಂಗಂಗಳಿಂದ ಮುಪ್ಪಾಳಿಷ್ಟೆ ॥ ಒಸ್ಗೆಸೆಯುಟ್ಟ ಸುರನರ
ಭುಜಂಗರುಗಳಸುಗಳ್ ಹಿಲ್ಗೊಂಬ ಕಾಲೂಡೆಗಟ್ಟ ವಡೆತಂಪಕ, ಟ್ಬಾಳ್ಗಳ
ಧಿಗೈವ ವಿಶಾಲಂಗರಗಿಬಿನ್ನಿವಿಸುತಿರ್ದನಗನೇಸಂಬೆನು ॥೧೦॥ ಸೀಳ್ವ
ನಿಳೆಯಂ ಕೀಳ್ವನದ್ರಿಗಳನಕ್ಕಸಂ । ತೂಳ್ವನೇಳಬ್ಧಿಯಂ ಪೂಳ್ವನಿ
ಗಿರಿಗಳಂ । ಬೀಳ್ವಗೆಡಿಸುತ್ತಸುಂಗೆಳ್ವನೀ ಬ್ರಹ್ಮಾಂಡಮಂ ಸ್ಫೋ
ಳ್ವ ರೌದ್ರಭಟರುಮ । ಬೀಳ್ವ ವಗ್ನಿಗೆ ಬಿರ್ದು ಪೇಳ್ವನುಳಿದಗಿರ್ಳೆಯು, ಸಾ
ಳ್ವನಂ ಸದೆವ ಪಳ್ಸಳ್ವ ನಂಬಿಡಿಪನೀ । ರೇಳ್ವ ರಜಗಂಗಳೂ ತಾಳ್ವದಿ
ನೆನೆ ನಗೆವೇಳ್ವ ದೆಂಬೆಸನೆಂಗನು ॥೧೧॥ ಸೆಗ್ಗಳೊ ಬ್ರಹ್ಮಾಂಡಮಂ
ಬ್ರಂಹನೆಲುಗಳಂ । ನುಗ್ಗುಮಾಡಲೋಸರಿಯುತರಣಮಂತೆಗೆಯಲೊ ।
ಸಗ್ಗದಸುಗಳಸಿರಿಯಂ ಸೂಡಲೊಪಾತಾಳದವರ ಸೊರಸಲೊಸೊ
ಕ್ಕಿಗ ॥ ದಿಗ್ಗಜಂಗಳ ಕೊಳ್ಗಳಂ ಕೀಳಲೋ ಫಣಿಯು ಬಗ್ಗರಿಯ ಸೀಳ
ಲೋ ಬೆಸಸು ಬೆಸಸೆನಗೆನು । ತಗ್ಗಳಿಕೆಯಿಂದಮಾರ್ಭಟಿಸುತಿರ್ದಂ
ಭೀಕರಾಕಾರನೇವೇಳ್ವೆನು ॥೧೨॥ ತರಾಗೆ ಬೇನೆ ನಗೆ ಬೆಸಸು ಬೆ
ಸಸೇಗಸಂ । ಪಾರವುಂ ಪೊಳ್ವೆಂದೆನುತ್ತಲ್ಯಧಿಕತರ । ಘೋರರೌ
ದ್ರಂಗಲಾರ್ಭಟಿಸುತಿರ ಪುತ್ರಪ್ರತಾಪಕೆಳ್ನಗಗೋಡಿದ । ಕಾರುಣ್ಯ
ದಿಂ ನೋಡಿ ಸಕಲರಂಗೇಳ್ವನೀಂ । ಪೇಳನಿಂತೀನ ಪ್ರಮೂರ್ತಿಯುಂ ಭದ್ರ
ನದು । ಕಾರಣಂ ನೀಂ ವೀರಭದ್ರನೆಂದೀಳ್ವ ತಂಕ್ರಪವೊಳಂ ದಿಂತೆಂದ
ನು ॥೧೩॥ ಕೇಳ್ ಲೆಕುಮಾರಕ ನೆ ದಕ್ಷನೆಂಬನನೆಮ್ಮ । ನೋಲಗಿಸಹರಿ
ವಿರಿಂಚೇಂದ್ರಗೋರ್ಡಿಯಾಗಮಂ । ಮೇಳ್ಟಿಸಲಾ ಕಥಂತದ ಗೋಳೀಳ್ವ
ರಿಯುಳಿದಧ್ವಸ್ತಳಕೆನೀನೆಪೋಗಿ ॥ ಪೇಳ್ದೊಮ್ಮೆ ಬುದ್ಧಿಯಂ ರುದ್ರಂ
ಶಮಾಯುದೊಡೆ । ಪಾಳಾಗಿಸವ್ವಗಮುಸೋಕಲ್ಲರಂಬಿಡದೆ ಪಿಡ । ಯಾ
ಳಾಗಿ ತಪ್ಪದೆಂದೀಗ್ವಂನೇಮಿಸಿಕುಮಾರನಂ ಬೀಳ್ಕೊಟ್ಟನು ॥೧೪॥
ಕೇಳ್ದನಾ ಹರವಚನಮಂ ರೋಷವಾರ್ಧಿಯೊಳ್ । ಗಾಳ್ದನಂತೇಗೆ
ಯ್ವೆನೆಂದೆರಗಿ ಮೂಡೇವ । ರಾಳ್ದಂ ಬೀಳ್ಕೊಂಡು ನಡೆತರುತ್ತೆಂದನಾ
ಹರಿಯುಜಸುರೇಂದ್ರಾಗ್ರರಂ ॥ ಬಾಳ್ ಶ್ರಗಳಂ ಕೊಂಬೆನುಳಿದವರ ಪ್ರೊ

ಡೆಗಳಂಸೀಳ್ದಿಕ್ಕುವೆನ್ನಿಕ್ಕುವೇಂಕಾದಲೆನಗೆದೊರೆಯಾಳ್ಧಿಟದೊಳ್ತಾ
ರೆಂದುವೀರಭದ್ರಂಕೋಟಿಸಿಡಿಲಂತೆಗರ್ಜಿಸಿದನು॥೧೪॥ ಅಧ್ವನಿಗೆನಡ
ಗುತ್ತೀರೇಳ್ಜಗಂನಿಖಿಳತಾ। ರಾಧ್ವಚರರಾಚರಿಸಿಕೆಡದರಿಳೆಯೊಳ್ತ್ರ
ಹಾ।ಸಾಧ್ವಸಂಮೂಡಿದುದುಹರಿಯಜಾದ್ಯರಸ್ತೃದಯದೊಳದಕ್ಷನ
ಳವಳಿದನು॥ಅಧ್ವರಾಲಯದಮುನಿಪಾಲಕಗ್ಗದರಿವೃಷ। ಭಧ್ವಜಾ
ಟೋಪವೆಂದರಿದರೊಳಗೊಳಗೆದ। ಕ್ಷದ್ವಂಸಕಂನೆನದನೊಂದುಕಾ
ರ್ಯಮನದೇನೆಂಬೆನಟ್ಟಿರಿಯುವು॥೧೫॥ ರೌದ್ರದಿಂಹೂಂಕರಿಸೆಪೊರಪೊ
ಣ್ಮೆದಳ್ಮಹಾ।ಭದ್ರಕಾಳೀಶಕ್ತಿಮತ್ತೆಪಡದಂತನ್ನ। ತದ್ರೂಪವೀರ
ರಗಣಿತಕೋಟಿಯಂಚತುರ್ಬಲಮನಗಣಿತಮನೊಡನೆ॥ ಉದ್ರೇ
ಕದಿಂಬಲಂನಡೆಯಲುಹಿಗ್ಗಪಕು। ಲಾದ್ರಿಕಟ್ಟೆವೆನದೇನಾದರೋಘ
ರೆಯಂನ। ಮುದ್ರಂಗಳೊಂವಾಗುತಿರ್ದವಾಕ್ಷಣದೊಳದನೇನೆಂಬೆ
ನದ್ಭುತವನು॥೧೬॥ ವಿಕ್ರಮದೊಳ್ಮೆದುವಚತುರ್ಬಲಾಳಿಗೆಧರಾ।
ಚಕ್ರಮುಬ್ಬರಿಪಬಹುವಾದ್ಯಘೋಷಕೆದಿಶಾ। ಚಕ್ರಮುತ್ತದಸಿಂಧ
ಸೀಗುರಿಪತಾಕೆಚಾಮರಛತ್ರತತಿಗೆಗಗನ॥ಚಕ್ರಮಿದೇಳ್ವಕೆಂಪೂ
ಳಿಧಾಳಿಗೆನೆಗಳೊ।ಶಕ್ರಜಗಮಿಂಬಿಲ್ಲೆನಲ್ಬೇಗತಮತಮಗ। ತಿಕ್ರಮಿ
ಸಿನೆಲನೀದುದೆನೆನಡೆದುದಾಸೈನ್ಯಚಕ್ರಮಗನೇನೆಂಬೆನು॥೧೭॥
ಇಂತಾಮಹಾಸೇನೆಯಂನೆರಪಿವೀರಭ। ದ್ರಂತಳದೋರ್ವಗಣನಾಥ
ನಂಕರೆದುನೀಂ।ಮುಂತಾಶಿವದ್ರೋಹದಕ್ಷನೆಡೆಗೈಟಿಸಂಮಯಬರ
ವನೆಚ್ಚರಿಸದೆ॥ ಎಂತಾದೊಡಂಮಹಾದೇವವಿರಹಿತಯಜ್ಞ। ಮಂತರಿ
ಪ್ಪುದಾರುದ್ರಭಾಗೆಯಂಕೊಟ್ಟಪೇ। ವಂತನಾಗಂದುಪೇಳ್ದವನೆಂಗ
ಮಾತನೆಮಗುಸುರೆಂದುಬೀಳ್ಕೊಟ್ಟನು॥೧೮॥ ಜೀಯೆಂದುನಮಿಸಿ
ಬೀಳ್ಕೊಂಡುಗಣೇಶ್ವರಂ।ವಾಯುವೇಗದೊಳೈದಿಶಾಲೆಯಂಪೊಗು
ತನಿಬಿ। ಕಾಯುಧಾದ್ಯತಹಸ್ತನಾಗಿಹರಿಯುಜರಸಂದಣಿಗಳಂಬಗಿ
ದುಪೊಗಿ॥ ಆಯಜ್ಞದೀಕ್ಷಿತನಮುಂದೆನಿಂದೆಲಪ್ರೌಸಿಂ। ನಾಯತಿಕೆ
ಯಿದುಮಹಾಸಿಂಹಮಂಕೆಣಕಿಗೋ। ಪಾಯುಗಣದಿಂಬಾಳ್ವೆನೆಂಬ
ಮೂರ್ಖರವಾಳ್ಕೆಯಾಯ್ತುಕಟಕೇಳೆಂದನು॥೧೯॥ ಆರನೊಲಿಪ್ಪೊಡೆಯ
ಜ್ಞಮಂಪೂಳ್ಪಿರೀನೆರದ।ಹಾರುವಬ್ರಂಹಾಚ್ಯುತರ್ನೀವುಜನಿಸಿದಿರ।
ಟಾರಿಂದನೀವಿಗಹುತವಹಂಗಾಹುತಿಯುನೀವಸುತಿಮಂತ್ರಂಗಳು॥
ಆರನುರೆನುತಿಪವೆಂದೆಂಬುದಂಮರದಹಂ। ಕಾರದಿಂಕೆಟ್ಟಿರಿಯುಕಾರ
ಣಂಬರಬರ। ಲಾವ್ವರುಮನಮರಿಗರ್ದಭಾಕಾರಮಾದೊಲಾಯ್ತುಬಾ
ಳ್ಕೆನಿಮಗೆಂದನು॥೨೦॥ ಕೇಳಿಕಿಡಿಕಿಡಿಯಾದನಾದಕ್ಷನೆಲ್ಲರುಂ।ಕಾ

ಳಿಕಡುರೋಷಂಗೆಳೆಂಬರಿದೆನೀನದೇ। ಕೂಳ್ತಿಹೆಯಾರವಂ ನಿನಗ
ದೇತಕೆ ಮಂತ್ರತಂತ್ರರಾಗಸ್ಯಚರಿತಂ॥ ಹೇಳೀಗ ನೀಂ ಬಂದ ಹದನನೆ
ನೆಮಗುಳಿದುಕಂ। ಗಾಂಗಿಗಳುಕಂಪಡರಲಿನಿಬರಂ ಸದೆವೆನೆಂ। ದಾಳೋ
ಚನಂಗೈದು ಪತಿವಚನಮರಿದಾಗಣೇಶನಂದಿಂತೆಂದನು॥೨೧॥ ಆರೆಂ
ಬುಗರಿಯುರೇ ಕೇಳ್ಳಿಮ್ಮ ಮುತ್ಪ್ರವ। ತಾರದುಕ್ಕಂ ಮುರಿದಬೊ
ಮ್ಮಶಿರವರಿಗಜಗ। ದಾರಾಧ್ಯಶಿವನೇತ್ರಶಿವದೂತನಾಂ ದೇವನಾಜ್ಞೆ
ಯಿಂ ಬಿಜ್ಞಮುಖದ॥ ಈರುದ್ರಭಾಗೆಯಂ ಬೇಡಬಂಗೆಂ ಕೊಡದ। ಕಾರ
ಣದಿ ನೊಳ್ಪನರಿನಾಯಕ್ಕಳ್ನಿಂ ವಿಶಾಕ। ರೀರದಡಗ್ಗೌತಣವನುಸುರ
ಬಂದವನಲ್ಲದಾನೊಳ್ಪನಲ್ಲೆಂದನು ॥೨೨॥ ಎತ್ತಣವನೀಶ್ವರಂ ರುದ್ರ
ಭಾಗೆಯದೆತ್ತ। ಕತ್ತಹಡಿಬೀಗಳೀ ಬಾಯ್ಸಡಿಕನಂ ಸೂಂಕೆ। ನುತ್ತ
ನೂಂಕಲ್ಪ ಪ್ರಚರಸ್ತಮಂ ಕಡಿಯುಲನಿಬರುಂ ಮುಳಿದ್ರೈದಲು॥ ಮು
ತ್ತೆಪ್ಪಗಂಗೆಲ್ಪ ವೀರಭದ್ರಂಗೆ ತ। ದ್ವ್ರತ್ತಾಂತಮಂ ತಿಳಿಪಬೇಕೆಂದು ಬಂ
ದು ತಂ। ನುತ್ತಮಾಂಗಕೆ ಕೈಯನಿಟ್ಟು ಬಿನ್ನವಿಸಿದಂ ತಾಂ ಪ್ರೋನ್ನತ ಕ
ವನು॥ ಆ ಮಾತಗೇಳ್ದಂ ತಾಳ್ದ ಕೋಪಮಂ ಭೀಮಾವತಾರವೀ
ರಂ ಪಿಡಿದು ಚಾಪಮಂ ಮು। ನೀಮಹಾಲಯಮಂ ಲಯಂಗೆಯ್ವೆನೆಂದು
ಪ್ರತಾಪಮಂ ನುಡಿದು ಮಿಡಿದ ॥ ಸೋಮಾರ್ಕರಡಗಿದಗ್ನಿ ಡಗಿದ
ಶ್ರೀರ್ಪಮನು। ಸ್ವಾಮಿ ರಗಣಂಗಳಾ ದ್ವನಿಗೇಳ್ದ ತಾಪಸ। ರಾತ್ತನೊಡ
ನೆಸುಳ್ಗರಿಳ್ಗರಾಪ್ಪಮನಂತ ಪ್ಪರಂಕೆಡಿಸಲ್ಕುದೆ॥೨೩॥ ನೊಳ
ಗಿದವು ಭೇರಿಗಳು ಭಾರಿಗಳು ನಡೆದವಾ। ಗಳೆಘೂಳ್ಳಿತ್ತಿದವ ಮುತ್ತಿ
ದವು ಛತ್ರಮುಂ। ತಳರಿದವು ತೇಜಿಗಳು ವಾಜಿಗಳಗ ಮಕದಿಂತೇಲ್ಗ
ಳಂ ಸೂಟಿಯುಲ್ಲಿ॥ ಸುಳಿಶಿದರ್ಪ್ಪರಥಿಗಳಾರಥಿಗಳೋಜೆಯಿಂ। ಬಳಸಿದ
ಪ್ರೋರ್ಕಲ್ಕ ಮಖಶಾಲೆಯಂ ಜ್ವಾಲೆಯಂ। ಕೊಳಿಸಿದಪ್ಪಟುಭಟರ್ರ್ಪ್ರತಿ
ಯಿಂ ಭೀತಿಯಿಂ ಸಕಲಜನಮುಳವಳಿಯಲು ॥೨೪॥ ಯಾಗಶಾಲೆಯ
ನೊಲ್ದುಸುತ್ತಲುಂ ಕಾವ ಶತ। ಯಾಗ ಚತುರಂಗಮಿವರುರುಬೆಯಂ ಕಂ
ಡು ಪಡ। ಹೋಗಬಿರ್ಕ್ರಂ ಮರಸಿ ಮುಂಟಪಕೆ ಕಿಚ್ಚಿನಿಕ್ಕಿದ ಕಳ್ಬಂಟ
ವರಂ॥ ಬೇಗಬಿಂಪಿಡಿಯೆ ನುತ್ತ್ರೂದಗಿ ಬರುತಿರ್ಪರಂ। ತಾಗಿ ತಲೆಗಳನ
ರಿದು ಮುಂಡರುಂಡಂಗಳಂ। ಮೇಗಣಂ ಹೋಮಕುಂಡದೊಳ್ಪೈದೆಕೆಡೆ
ಪಿದರ್ಕಡು ಪಿದರ್ಪ್ಪರಭಟರನು॥೨೫॥ ಆನೆಕುದುರೆಗಳ ಸುಂಡಿಲ್ಗಳಂ
ಕಾಲ್ಗಳಂ। ನಾನಾಭಟಾಳಿಗಳ ಬಾಲ್ಗಳಂ ತೋಳ್ಗಳಂ। ನೂನರಥಿಕ
ರತಲೆಗಳೋಳ್ಗಳಂ ಸೀಳ್ಗಳಂ ಬಾನಿಂದೆ ಬೀಳುತಿರಲು ॥ ಏನಿದಚ್ಚರಿ
ಎಂದು ನೋಡಿದರ್ಬ್ಬಡಿದರ್ಧಸಿಯಿಂ ಕಟ್ಟೆವೆನುತಾಡಿದರ್ಕೋಡಿದ।

ರತ್ನಾನೆತನಗೆದ್ದುಬಿದ್ದೋಡಿದರ್ಮಡಿದರ್ಭೀತಿಯಿಂಸುರಮುನಿಗಳ್॥
ಒಳಗೆಗಜಬಜಮಾದುದಾಕ್ಷಣಂಭಾವಿಸಲು। ಹಳಸಿದುದುಯುಜ್ಞಗಿಜ್ಞ
ದವಮಾತಜೇಂದ್ರರುಂ। ಕಳವಳಿಸಿದರ್ಮುನಿಜನಾಳಿಬಾಯ್ಬಿಡುತಿರ್ದ
ದಸುರಾಂತಕಂಮನದೊಳ್ ॥ ತಿಳಿದನೀಹದನನರಿದೆಸಗಿಪಶ್ಚಾತ್ತಾ
ಪ। ದೊಳಗದೇಂಕಾರಣಂಕಂಡುದಂಕಾಣ್ಬನಿದ। ಹಳಚಿನೋಡುವೆ
ನೆನುತ್ತೋಡುವಸುರಾಳಿಯಂಕೂಡಿಕುರಿಗೈದನಂದು॥ ೨೮॥ ಕಣ್ಗೆಟ್ಟ
ದಿಗ್ಪಾಲಪಾಲರಂಭೀತಿಯಿಂ । ನಾಣ್ಗೆಟ್ಟಸರ್ವಗಂಧರ್ವರಂಪರಿದೈದಿ।
ಗೋಣ್ಗಳಂತಡವರಿಸಯಕ್ಷರಕ್ಷಕರ್ಕಳಂಸುಗಿದಕಿನ್ನರನರರನು॥ ಬಿ
ಣ್ಗೆತ್ತಿಗಳನುಗಿದಸಿದ್ಧಸಾಧ್ಯರನೋಡಿ । ಮಾಣ್ಗೆನಿಂಮುಯುಭಯಂ
ಪೋಪೆವಿದೆಕಾಳಗಕೆ । ಪಣ್ಣಜಾಕ್ಷ್ಯರುನೆನುತನದೆದನಾಗರುಡವಾ
ಹಂಗಾಹಸತ್ವದಿಂದಂ॥ ಘೋಗ್ಗರೆದವನಿತಲೋಳ್ಪಾಟನಿಪ್ಪಾಳಿವಮಾ
ತೇಗ್ಗಳೊಪ್ಪಿಗರುಪೊದಳ್ದುದಿದುಗುವೈಬೆವು। ಠ್ನೀಗ್ಗಳೊಗೆಯಲಾಳ್ವ
ಜರಾಜಿನಡೆದುದುಭಟಗ್ಗಟಕಟಿವುಂಕೊಂಡುದು॥ ಕಾರ್ಗಾಲದಬ್ರ
ಪಿನಲಾನೆಗಳ್ನಡದವನಿ। ಬರ್ಗೊಡಿಜಂಭಾರಿಯಂಭಾರಿಯಂಕಕ್ಕಿ।
ದಿಗೊರ್ಳಿಸೆನಡೆತಂದನಬಿಳಿಸುರಸೇನೆಯೊಡವರಲಂದುದೇವೇಂದ್ರ
ನು॥ ೩೦॥ ಕೇಳ್ಪಗುಣಭೂಷನೀಂಸಿದ್ಧರಾವೇಸಸುರ। ರಾಳ್ಪಳಿದು
ದಾಗಳ್ಪೈನೂರ್ಪ್ರಕ್ರಮಭವಬಲ । ದೋಳ್ಪಿನಾಪದಚೂಣಿವೊಳ್ಪೊ
ಗೆಗೆಥೊರೆಗಳಾರಥಕೆರಥಮುಕ್ವಕಕ್ವಂ । ಆಳ್ಪಿಪಟರೋಳ್ಮ್ರದೇಭಂಗ
ಳೆಮಾದದಾನೆ। ಗಳ್ಪಮಾನತ್ತಿಂತುಕಾಗುತಿರ್ದರೊಪ್ಪಿಯಗ್ಗ। ಸೂಳ್ಪ
ರಿಯೆಕಿಡಿಗಳಂಸುಡಿಗಳಡಿಗಡಿಗೆಮೂಗಲಿಸೆಕೇಳಿಗರ್ಭತವನು॥ ೩೧॥
ನೂಂಕಿಗಜದಿಂತ್ರಿವಿಸಿದಮಾರ್ವತೆಕ್ಕುಡದೊ। ಳ್ಗಾಂಕಿಹಯುದಿಂಬಿರಿ
ದರಾರಾವ್ರತಕರ್ರು । ಳೊಪ್ಪಿಂಕಿಸರಳಿಚಿಪ್ಪಾಡಿದರ್ವರೂಧಾರೋಹಕ
ರ್ಭಟಬಾರ್ತಿಯಿಂದಂ॥ ಅಂಕೆಗೊಂಡಿರಿದುತರಿದರ್ತಲೆಯನಟ್ಟಿಗಕ್ಕಿಂ
ಕರಕ್ತಂಪೊನಲ್ವರಿಯಲಜಿಗಿಜಿಯುಂಗ। ಣಾಂಕಣಂಕೆಸರಾಗೆಕಾಗೆಗೂ
ಗೆಗಳಾಡೆಮೋಗೆನೆರದಿಬಲಗೊಳ್॥ ೩೨॥ ಈರ್ಬಲಂಸಪುನಾಗಿಕಾ
ದಪೇಂದ್ರನಮುಳಿಸು। ಪರ್ಚಿಕಂಡಣಿಳೆದಿಕ್ಪಾಲಕತರ್ಂತವ್ರ। ಸ್ಬ
ಲಸನ್ನಾಹದಿಂದೊತ್ತಿಕೋಪದಿಂದಂಬುಗಳಪೇರ್ಕ್ರಳಿಯನು॥ ಒರ್ಪ್ಬ
ರ್ಪ್ಬರೊಂದುಕಡೆಯೊಳ್ನಿಲ್ತುಕರೆವುತ್ತ । ಪೆರ್ಬಡೆಯನೊಳಪೊಕ್ಕು
ಬರೆಕಂಡುವಿಕ್ರಮದ । ಗರ್ಬಿಂವಿರೋಧನಾರ್ಭಟಸಿಕೈದೋರಿದದರ್ಭ
ತವನೇನೆಂಬೆನು॥ ೩೩॥ ಬಾಯ್ಗಳಂಕೊಯ್ಬೀಳಹೊಯ್ದಾಯ್ದುವೇ
ಣ್ಡಿಸೆಯ। ನಾಯ್ಗಳಕರುಳ್ಗಳಂತಿನಿಸೂಮುರುಳ್ಗೆಸುತೆ। ಬಯ್ಗಳಿನಬೊ

ಘ್ನಿಯಿಂ ವೀರೇಶನೆಸೆಯುತಿಂದ್ರಾಗ್ನ್ಯಷ್ಟದಿಕ್ಪಾಲರೆ॥ ನೇತ್ರಗಳಿಂ ಕೊ
ಯ್ದೆತ್ತಿ ನಭಕೆ ಕೊಂಡೊಯ್ಯುತ್ತಿರೆ, ಸುಯ್ಯಳುಣ್ಮಿದವವರ ವದನದೊ
ಳ್ಪೇಳ್ವುದೆ। ಸುಯ್ಗಳಗ್ನಿಯ ಮುಂದೆ ನಿಲ್ಲವವೆ ಕಾಣೆನಳವಿಯೊಳ
ವೆರ್ಗಳೆನೆಂದನು ॥೨೪॥ ಆ ಸೂರ್ಯ್ಯವಾಡಲ ಸಮಾಪಕ್ಕಪ್ಪೋಗಿ ಬಳಿ।
ಕೇ ಸುಧಾಪಾರಿಗಳು ಭೂತಳಕೆ ಬೀಳುತ್ತ। ದೇಸು ಬಲೆಪ್ಪೋ ಪೊಸರ
ಘಂಗಳೊಳ್ನಿಂತು ಬೊಬ್ಬಿಡುತ್ತೆಂದರಿವಿರಾಗದೆ॥ ಮೋಸದೊಳಗೆಚ್ಚ
ಸೆಣಕೆಬ್ಬಿಸಿದ ಬಲ್ಪನೆಂ। ಮಾಸರಿಸದೊಳು ತೊಡಕೆ ಕಾಣಬಹುದೆಂ
ದೆನುತ। ಸಾಸಿರ ಸರಳ್ಗಳನದೊರ್ವರೆಚ್ಚಂ ಪಾರುದ್ರಗಣದ ಮೇ
ಲೆ ॥೨೫॥ ಸಿಡಿಲಭರವೆತ್ತೆ ಶಿಶುಗಳ ಬಳಗವೆತ್ತ ಘುಡು। ಘುಡಿಪ ಸಿಂಗ
ಮುಗೆತ ಸೀರ್ಗ್ವರಿಗಳೆತ್ತಲಾ। ವ್ಯಡಸಸುತನೆತ್ತ ಸುರರಥಟೆತ್ತ ಕಾ
ದು ಪೊಡೆ ಕೇಳಿದೈ ಸಿದ್ಧರಾಮು॥ ಕಡಿದನನಿಬರ ಸರಳೆ ಸಾರವಂ ಮುತ್ತೆ
ಚಟ್ಟ ಪಿಡಿಗ ಕಾರ್ಮುಕ ಛತ್ರ ಚಮರ ಜಯ ಸಾರಥಿಗ । ಳೊಡವೆರದತೇ
ಗರ್ಳಂ ಕತ್ತರಿಸಿ ಸಂಮುಖದೊಳಾ ಭರ್ಟಸಿ ನಿಂದಿರ್ದನು॥೨೬॥ ಕಂಡು
ಹವ್ವಿಸಿದ ಕರ್ಗಲಕೆ ಲಂಬಭರಯಿಂ। ಗೊಂಡು ಬಿದ್ದಗ್ಗಲಂ ಬುದ್ಮಂದು
ಗೆಟ್ಟಿದೆಯು । ಗುಂಡಿಗೆಗಳೊಡೆದರೆ ಬರಾ ಚರಿಸಿದರ್ನಡುಗಿದರ್ನಲವ್ರುಗೆ
ಟ್ಟಸಿಬರು॥ ಕಂಡಕಡೆಗಾಳಿ ಪರಿದೊಡನೆ ತಮತಮಗೆ ನುಂ। ಕೊಂಡೆ
ಟ್ಟರೆನ್ನ ಬಿಡ್ಡೋಡಿಯಾ ಸರಸತಿಯು ಗಂಡನಂ ಮುರೆಬೊಕ್ಕು ದಖಿಳ ದಿ
ಕ್ಪಾಲಕರ ತಂಡ ಮುದನೇನೆಂಬೆನು ॥೨೭॥ ಬಿಡುಮುಡಿಗಳಿಂ ತಪ್ಪಿ
ನುಡಿಗಳಿಂ ನಡೆಗಳಿಂ। ನಿಡುಸುಯ್ಲಿಂದೊಡೆದ ನೆತ್ತಿಗಳಿಂ ಕೈಗಳಿಂ। ಕ
ಡು ಬರತ ವದನದಿಂ ರದನದಿಂ ಗಧರದಿಂ ಮುರನಿಕರಂ ಕೆಡೆದುದು॥ ಸೆಡೆ
ದಪಿಂ ನೋಟದಿಂ ಪೋಟದಿಂ ಘುಟದಿಂ। ಕಡಿವಡೆದ ಕಾಲ್ಗಳಿಂ ದೇಳ್ಗಳಿಂ
ತೋಳ್ಗಳಿಂ। ದೊಡನೊಡನೆ ನೊಂದು ವಿಧಿಯೊಳು ಚೀರಿದೂರಿ ತೋ
ರಿದಳಗ್ಭ ತಾತ್ಕಾರನಂ॥೨೮॥ ಅರಿವಂ ವಿಲಯ ಮಾರಾರಿಯೋ ಮಾರಿ
ಯೋ। ಸಾರಿವಂ ಕಾಮುರ್ಗಿಲ ತಾತನೋ ಭೂತನೋ। ಭೂರಿವೈರಿ
ಪ್ರಾಣಪಾಠನೋ ವೀರಸೋ ನೋಡಬುಜಭವ ಮೇಲನು॥ ಆರಯ್ಯ
ದೀಯಾಗರೋಗಮಂ ತೊಡಗಿಬಿರಪಾರಯ್ಯ ನಿಮ್ಮನಿಂ ತಾವ ದೇವ
ನತೋಲಿ। ಸಾರಯ್ಯ ಮಾದ ಕದನದೊಳೆಂದು ನೊಂದು ಸುರಕುಲವೈ
ದೆ ಮೊರೆಯಿಟ್ಟುದು॥೨೯॥ ಕೇಳಿ ಕಾಯ್ಪೇರಿದಂ ಮಾರಿದಂ ಸಾರಿದಂ।
ಕಾಳಗವನುಬ್ಬಿನಿಂ ಕೊಬ್ಬಿನಿಂ ತಬ್ಬಿನಿಂ। ದಾಳೆಲಿ ಭಮುಳ್ಳುವದೆ ಬ
ಳ್ಳುವದೆ ತುಳ್ಳುವದೆ ನಾಡಭಯರಸಮಂ ಮೊಳೆ॥ ವಿಶ್ವಪನರಾತಿಯಿಂ
ಹೇತಿಯಿಂ ಖಾತಿಯಿಂ। ತಾಳೆದಿರಿ ಸುರಬಲಂ ನರಬಲಂ ಪೆರಬಲಂ। ತೂ

ಳಿಸುತ್ತಲ್ಮುತ್ತಲೊತ್ತಲಿಂದಬ್ಜಗರ್ಭಂಗರ್ಜಿಸುತ್ತಿರ್ದನು||೪೦|| ಕಟೋ
ಡಿದಸುರಸುರನರಭುಜಂಗರ್ಭೀತಿ| ಬಟ್ಟೋಡಿದಬ್ಜಾರ್ಕವಸುಮನು
ಗಳೊಡೆಯನಂ| ಬಿಟ್ಟೋಡಿದಪ್ಸರಕಿನ್ನರರ್ಸಿದ್ಧವಿದ್ಯಾಧರರ್ಕಿಂಪು
ರುಷರು|| ದಟ್ಟಯಿಸಿದರ್ಜಗತ್ತ್ರಿತಸೇಮವಿಂದೆ ಘೋರ| ಮುಟ್ಟಯಿಸು
ವಾದ್ಯಘೋಷಣೆಗಳಿಂನಡೆತಂದು| ನೊಟ್ಟಯಿಸಿಮುತ್ತಿಮೂವಲಿಸಿ
ದರ್ಕಳಹಮನದೇನೆಂಬೆನು||೪೧|| ಉರಗಂಗಳುರವಣೆಗೆಗರುಡಕು
ಲಮುಳಿಗುಮೆಕರಿಗಳುರುಬೆಗೆಸಿಂಗದಧಟುಕೆಡೆಗುಮೆಸೊಕ್ಕೆ| ದೆರ
ಳೆಗಳ್ಮುತ್ತೆ ಪುಲಿವಳೆಗಮೇಂಪಾಳೆಕ್ಕುಮೇಬ್ರಂಹಬಲಮೊತ್ತಲು||
ಹರಗಣಂಗಳ್ಗೆ ನೋವಕ್ಕುಮೇನಿಮಿಷದೋ| ಳ್ಪುರಬಲಂಸಾಸಿರಮು
ಹಾಪದ್ಮಮುಳಿದುದ|ಚ್ಚರಿಯಾಯ್ತು ಸಂಗರಂಭಂಗೆರಾದರ್ಕಳಲಸುರರ
ದೇಂವಣ್ಣಿಸುವೆನು||೪೨|| ಒತ್ತಿದರ್ತರಿದರಿರಿಗರಳ್ಕೆರದರುರುಬೆಬೆಂ|
ಬತ್ತಿದಸುರ್ಗಟ್ಟರಾರ್ದ್ದರೊಪ್ಪರ್ದರುಗಿದುಬಾ| ಳೆತ್ತಿಜಡಿದರೊಪ್ಪಡೆದರೊ
ಡೆದರಾಬ್ರಹ್ಮಾಂಡಮಂಬೊಬ್ಬೆಯಬ್ಬರದೊಳು|| ಮುತ್ತಿದರ್ಕಡಪಿ
ದರ್ಕೊಡಪಿದರ್ಮುಡುಪಿದ| ಮರ್ತ್ತರಿಮೆಪೆಟ್ಟಿದರ್ಕೊಟ್ಟಿದರ್ಮೆಟ್ಟಿದ|
ರ್ಸತ್ತರಂನೆತ್ತರಂಬಿತ್ತರದೊಳೊತ್ತರಿಸೆ ಶರಣುಂಬೆಂಕೊಂಡುದು||೪೩||
ಸುರಪಂಸುರುಳ್ದನಳನಳ್ದನೆಮಂಯಮುಳೆ| ಕರಮನುರೆಮುಗಿದು
ದನುಜಂಗೆಟ್ಟತದ್ವರುಣ| ನಿರದೆಶರಣೆಂದುವಾವಾಯುಕಾಯೆಂ
ದುಧನದಂಮನಕೆಮುಂಚಿಪಾಯ್ದು|| ತರಳಿಗಳ್ಸರಣೆಗೆಟ್ಟಾಮನುಗ
ಳನುಗುಂದಿ| ಗರಗಳ್ಕರಂಗಿವಸುಗಳ್ಮುಸುಂಕಿಟ್ಟೋಡೆ| ಸರಸಿಜಭವಂ
ಕಂಡುಕಂಡು ತಾಳಗಕೆಮುಂಕೊಂಡನದನೇನೆಂಬೆನು||೪೪|| ಮುರಿ
ದಬಲಮಂಜರೆದುಹಿಂದಿಕ್ಕಿಮುಂದೆತಂ| ನುರುಮಾತ್ರಬಲಮುಡಬ
ಲಂಗಳೊಳುಸಂದಣಿಸಿ| ತರಗೆಲೆಗಳಗ್ನಿಗಿದಿರಪ್ಪಂತೆರುದ್ರಬಲಕಿದಿ
ರಾಗಿನಡೆದಜಬಲಂ|| ಪೆರೆಸಾರ್ಜಗತ್ಕರ್ತುಬಂದನಡೆಕೊಂದನದೆ|
ಬರಿದಕೆಡಬೇಡತೊಲತೊಲಗೆಂಬಕಹಳೆಮುಂ| ದೊರಲೆಭರಸಿಡಿಲಂ
ತೆಬೊಮ್ಮನಾರ್ಭಟಿಸಿತಾಗಿದನಂದುಹರಬಲಮನು||೪೫|| ಎಲ್ಲಿಪರ್
ನಿನಿತುಪೊಳ್ತೀಸುರಬಲಂಗಳೆಂ| ಚಲ್ಲಬಡಿದಣ್ಣನಂತೋರ್ತೋರೆನು
ತ್ತಬ|ಲ್ಬಲ್ಗನೊದರಿಸುತಂಬುಗಳಮುಳೆಗಳಂಕವು ತಜ್ಜಗರ್ಭಂನೂಂ
ಕಲು|| ಬಲ್ಲಿದತರ್ಗಿಹಿಮ್ಮೆಟ್ಟಿದರ್ಕಲಬರ| ಲ್ಲಲ್ಲಿನಿಂದರ್ಕಲಬಧ
ಳೆವಳಿಯಕಂಡಸುತ| ದಲ್ಲಣಂವೀರನಾಬ್ರಹ್ಮನಿದಿರೊಳ್ನಿಂದುನುಡಿ
ದನಪನೇನೆಂಬೆನು||೧೬|| ಉಕ್ತಿಸತಿಯರಸನೀಂಚತುರಾನನಂಪರ
ಮ|ಭಕ್ತನೆಂದೀಶ್ವರಂನಿನಗೆಕೃಪೆಯಿಂದೆಸು| ವ್ಯಕ್ತಮಪ್ಪೀಜಗತ್ಸೃ

ಷ್ಟಿಯೊಡೆತನವಿಾಯೆಮಗನವರುಳಿಪ್ಪಿನಿನ್ನಂ॥ ಯುಕ್ತಿಗೆಡಿಸಿತುಜ
ಗಲ್ಲಯಕಿಟ್ಟಯಜ್ಞವಾ। ಸಕ್ತಿಯಂಸುಡುಶರಣೊಲ್ವಗುಶಿವನನಲ್ಲದೊಡೆ
ಶಕ್ತನಾಗೇಳ್ವಮರಕೆನೆಬೊವ್ಕನಂದುಘನರೋಷದಿಂದಿಂತೆಂದನು॥
ದಿಟ್ಟನೀನಾಳ್ದಿನ್ನಪೆಸವಗೇನೆಮಗಗಾ। ರೊಟ್ಟರೀಬ್ರಹ್ಮತ್ವಮಂಪು
ಸಿಯೆವಿಂತುಕಲುಕುಟ್ಟುವರೆನೀನೆವೆಕ್ಕಳಂದಜಂಸರಳಂಕರೆವುತಿ
ರಲು॥ ನೆಟ್ಟಸಸಿಯಂದಿನ್ನೆಗಂತಾಳ್ದರೆಮಗಂಬು। ಗೊಟ್ಟಲಾಭಾಪ್ರನಿ
ನ್ನಳಿನೀಶಿರಂಗಳಂ। ಕುಟ್ಟಿಶಿವರುಂಡಮಾಲೆಗೆಕೊಡುವೆನೆಂದುಕಣೆ
ಗಡಿಗೆಗ್ಗಸಾವೀರನು॥೪೮॥ ಕೇಳ್ದುಸತನೆಲೆರಾಮವೀರನೆಚ್ಚಂಬು
ಗಳ್ವಳ್ಳಿಟ್ಟಿಸೂತಾಶ್ವಮಂಕೊಟ್ಟಿವಿಧಿಕಾಯ। ದೊಳ್ಳೊಕ್ಕುತಟ್ಟು
ಚ್ಚಾಕ್ಷಣಂಘುಡುಘುಡಿಸಿಕೋಪದಿಂಘಾಯವಡೆದ ॥ ಕಾಳ್ವಂದಿ
ಯಂತಜಂಸೋಸರಸದೊಳ್ವಿದಿಬಿ। ಲ್ಲಾಳ್ವಂಧಗಾರನೀನಜುದೆನುತ್ತೆ
ಚ್ಚಂಬು। ಗಳ್ವಳೆವುತ್ತೆ ತರಲುವೀರಭದ್ರಂಕಡಿದುಮಗುಳೆಚ್ಚುಬೊ
ಬ್ಬಿರಿದನು॥೪೯॥ ಮತ್ತಾರಥಾಶ್ವಮಂತೆವರಿದವಸವರಿದವು। ಸುತ್ತ
ಣಲಂಗಳಂಮುತ್ತಿದವುಕುತ್ತಿದವು। ಪೊತ್ತುವಿಧಿಯಂಗಗನಕೆತ್ತಿಗ
ವುಸುತ್ತಿದವುಬೊಮ್ಮಾಂಡದೆಲ್ಲೆಡೆಯೊಳು॥ ಮತ್ತೆರಣರಂಗಕೀಡಾ
ಡಿದವುಕಾಡಿದವು। ಪತ್ತುದೆಸೆದೆಸೆಗಳೊಳಗುರ್ಬಿದವುಪರ್ಬಿದವು। ಸು
ತ್ತಲತ್ತತ್ತಲುಂತೆರೆದಿರಿದವುವಿಾರಿದವುವೀರಭದ್ರನಕಣೆಗಳು ॥೫೦॥
ಈತೆರದೆವೀರಭದ್ರಂವಿಧಿಯನೊಡನೊಡನೆ। ಘಾತಿಸುತ್ತಿರೆಕಂಡು
ಘನರೋಷದಿಂಸುತ । ವ್ರಾತಮುಡಿಗಡಿಗೆಮುಸಗಲ್ಕೊಡುನಸುನಗು
ತ್ತಿರೆಭದ್ರಕಾಳಿಯೊಡನೆ॥ ಭೂತತಿಯಂಕೊಲುತಿರ್ದಳೊಂದೆಸೆಯೊ
ಳುಭೂತ। ಬೇತಾಳರಾರ್ಬಟಿಸಿನುಂಗುತಿರೆಕಾಣುತ್ತ। ಪ್ರೀತಕೋಪ
ದೆಬೊಮ್ಮನಂದುಬೊಮ್ಮಾಸ್ತ್ರಮಂತೊಟ್ಟಿಕ್ಕನೇನೆಂಬೆನು॥೫೧॥ ಕಿ
ಡಿಯನುಗುಳುತೆಪೊಡವಿಯಂಸುಡುತೆ। ಪಡಗಿಸುತೆಕಡಲನುಕ್ಕಿ
ಸುತುಡುಗಣಂಗಳಂ। ಕೆಡಪುತ್ತಸಡೆತಪ್ಪಬೊಮ್ಮಾಸ್ತ್ರಮಂಕಂಡುನ
ಸುನಗುತನಾಸ್ತ್ರದಿಂ॥ ನಡುವೆಖಂಡಿಸಿರತ್ನಮಕುಟಮಂಸವರಿಪೆ
ಣೆ। ಯೊಡೆಯೆಚಕ್ಕುಶಾರಥಿರಥಾಶ್ವಮಂಕೊಟ್ಟಿಸೆಡೆ। ಗುಡಿಗಟ್ಟವಿಧಿಯ
ನಂಬಿಂಮತ್ತೆವೀರಭದ್ರಂಕೆರಳುತ್ತೈತಂದನು॥೫೨॥ ಮೇಲಂತನಾಪ್ತ
ರಂಸವರಿವಾರಾಂತಸುರ। ಪಾಲಕನತೊಳ್ಗಳಂಕಡಿದುಮತ್ತಾಶಿಖಿ
ಯ। ನಾಲಿಗೆಯನೀಗಿಸೀಳಿಪೂಷನಪಲ್ಗಳಂಕಳೆದುಭಗನಕಣ್ಣ॥ ಆ
ಲಿಯಂಕೀಳ್ತುಚಂದ್ರನನೊರಸಿಮಿಕ್ಕಗ್ರ। ಹಾಳಿದಿಕ್ಪಾಲವಸುಮನು
ಗಳವಯವದೊಳಗೆ। ಮೇಲಾದಕುರುಪುಗೊಂಡೆಲ್ಲರಂಕಟ್ಟಿಭೂತಾ

ಳಿಗಳವಶಕಿತ್ತನು॥೫೩॥ಕೊಡೆಕಳೆಕಳವಾಯ್ತುಬಳೆನೊಳೆಗೆಮಿಕ್ಕ
ಭಟ।ರೋಡಿಮುಖಶಾಲೆಯುಂಸ್ಪೋಕ್ಕಸುರಮಥನನಂ।ದಾಡುವರ್ನ್ನಿಸ್ಸ
ನೆಲೆವೈಕುಂಠನಿನಗೀಗಳಾಯ್ತುಸುರಮಥನನಾಮಂ॥ ಕಾಡೆಯಜ್ಞ
ಮನೆಸಗಿಸಕಲರಂಭೂತಗಣ। ಕೀಡುಮಾಡಿದಿರಿವರ್ಗ್ನಡಿದರಿಂನಿರದೆ
ನೀ। ನೋಡಿಬದುಕಲ್ಲದೊಡೆಸಮರಕೇಳೆಂದುರಣಭಂಗವಂಪೇಳ್ದ
ರಂದು॥೫೪॥ ಕೇಳಿಸಲೆಮೌನವಂತಾಳಿದುಜ್ಞಾಂಬುಧಿಯೊ। ಳಾಳಿ
ಧೃತಿಯಂಮನಕೆಪೇಳಿಚಿಂತಾಬ್ಧಿಯಂ । ಘೂಳಿಯೋಡುವಪಟುಭ
ಟಾಳಿಯಂಮರಳಿಬರವೇಳುವೆಂದುಸುರಿಪಗೆಯಂ॥ ಏಳಿಸುವೆನಧಟ
ರಂಸೀಳಿಸುವೆನಂಗವಂ । ಬೀಳಿಸುವೆನಗ್ನಿಯೊಳಾತ್ತಳಿಸುರರೆಂದು
ದು । ವ್ಯಾಳಿಸುತವಂದಿರವದೋಳಿಸುತ್ತುಲ್ಕುಸುಕೆತೂಳೆಗಿಂಹರಿನ
ಡೆದನು॥೫೫॥ಮತ್ತಿಂದ್ರಮೊದಲಾದದಿಗ್ವಂದಕುಮಾರಕರ್।ಕೊತ್ತೊ
ತ್ತೆತರಣಿಮೊದಲಾದಗರಂದನರ। ಮೊತ್ತಮುಜಸಾತ್ಮಸೈನ್ಯಂಸಕ
ಲದೇಶಪತಿಗಳೆಸುತರ್ಲ್ಪೋಪದಿಂದಂ ॥ ಎತ್ತೆತ್ತಲುಂಪೋದವರ್ಮರ
ಳಿಕೂಡಿಬಂ। ದೆತ್ತಿನಡೆದರ್ತವ್ಮತಂದೆಗಳೆಡರಿಬಬಂ। ಸತ್ತಬಲನಂ
ದ್ದಬಂದಂತೆದಿಗ್ದರೆಗಳಂಧೂಳಿಯುಂಬಾಸಣಸುತ ॥೫೬॥ ಇಂತೆಸ
ವಚನ್ನಬಸವೇಶ್ವರಪುರಾಣಮಂ। ಸಂತಸದಿಬರದವರೋದಿದರ್ಗ
ರ್ಥವಾ । ಗ್ಯಂತವುಂಬಿಡದೆಪೇಳ್ದರ್ಗೆಪಠಿಸಿದವರ್ಗೆಭಕ್ತಿಯಿಂಕೇ
ಳ್ದವರ್ಗೆ ॥ ಸಂತತಂಸಕಲಸುಖಮಂಸಕಲಭೋಗವುನ। ನಂತಸೌ
ಭಾಗ್ಯವುಂಕೊಟ್ಟುರಕ್ಷಿಸುವನಾ।ಕಂತುಹರನಪರಾವತಾರನೆನಿಸು
ವಚನ್ನಬಸವೇಶಸಲ್ಕರಿಂದಂ ॥೫೭॥

ಮೂರನೆಯಕಾಂಡದಲ್ಲಿ ೪ನೇಸಂಧಿಮುಗಿದುದು

## ೫ನೇಸಂಧಿ.

ಸೂಚನೆ॥ ಪಕ್ಷಿವಾಹನನನುರೆಗೆಲ್ದುಬಳಿರಂತರಿದು । ದಕ್ಷಿ
ರವರಿದುಸೆರೆವಿಡಿದೆಲ್ಲರಂವಿರೂ। ಪಾಕ್ಷನೆಡೆಗೈತರಲ್ವೀರಭದ್ರೇ
ಶಂಗೆಶಾಂತಿಯುಂಮಾಡಿಸಿದನು॥

ಪದ॥ ಚಿದ್ರೂಪಚಿನ್ಮಯಜಗದ್ರಕ್ಷಕರುಣಾಸ। ಮುಗ್ರಗುರುತರ
ವೀರಭದ್ರಗುರಿತಪ್ರಜೋ। ಪದ್ರವಿಚ್ಛೇದನಲಸದ್ರಾಜರಾಜಸಖರು
ದ್ರಾಣಿಯರ್ಧದೇಹ ॥ ರುಗ್ರಭವಬಂಧನಶಿವದ್ರೋಹದಕ್ಷಮುದ। ವಿ
ದ್ರಾವಣಸ್ರಷ್ಟಿತೋದ್ರೇಕದೈತ್ಯಮುದ।ಛಿದ್ರವಿಶ್ರುತತರವಿಯದ್ರವ್ಯ
ಕೇಶನೆವಿರೂಪಾಕ್ಷಸಲಹೆಂಮನು॥೧॥ಅತಿಸೈರಾವುಹರಿಕಾಳೆಗಕನ
ಡೆಯಲಿಡೆ।ದಾಳೆತ್ತೋಳ್ತೊಡೆಗಳುರೆಕತ್ತದವುಪೂರ್ಗಮಂ। ವ್ಯಾಳ

ಶಿಶಿರಾರಾದಿಗಳ್ಕೆತ್ತಿಮುಂಬಗೆಯುದಂತು ತಲೆವೋವಬಳಿಗೆ ॥ ಕಾ
ಲಹೊಣೆಗಾರನೆಂದೆಂಬಗಾದೆಗೆಸಂದು । ಮೇಲನರಿಯದೆಬಂದು ಕಂ
ಡನಾವೀರಶರ । ಜಾಲದಿಂಪುಗಿದರಣರಂಗಮಂ ಹತಪಟುಭಟಾಂಗ
ಮಂಸುರಭಂಗಮಂ ॥೩॥ ಎತ್ತಿಕೈಕೋಲ್ಗಳಿಂಕಟ್ಟಿನಡೆದನಿಬರಂ।
ತತ್ತಧಿಮಿಕೆಂದು ಕುಣಿದಾಡಿಸುವುದನುಮುಳ್ಗಳಿತ್ತಲೆನ್ನದೆವಿನೋ
ದಂಗಳಿಂದೈರಾವತಾದಿವಾಹನಮನೇರಿ ॥ ಸುತ್ತಿಸುವದಂಘಾಯ
ದಿಂಮರಳಿಹೊರಳಿಬಾ। ಯ್ಬತ್ತಿವಿಧಿಯುಂಬಯ್ವುತಿರ್ಪರೆಮಣಿಂಗಂ
ಡು । ಚಿತ್ತಜಪಿತಂ ಪ್ರಳಯಚಿತ್ರಜಾರಾತಿಯೆನೆರೌದ್ರದಿಂನಡೆತಂ
ದನು ॥ ಭೋರೆಂದವಾಪಳೆವಾದ್ಯಗಳನಿನದಂಕಡೆಗೆ। ಸುರೆಂದವರಿಗ
ಳಂಕಹಳೆಗಳ್ಮೊಗೆದುರು । ಪ್ರರೆಂದನಂತೆಗಜಹಯರಥಪದಾತಿಮೆ
ರಸೈದಿದಘರ್ಘರಿಘೂರ್ಗಳು ॥ ಬಾರೆಂದು ಪಗೆಗಳಂಮೂದಲಿಸಿಕರೆ
ದೆಮ್ಮ । ನಾರೆಂದು ಸೆಣಸಿಬಿರಿನೊಡಲೆನಿಮ್ಮಡೆಯನಂ। ತಾರೆಂದು
ಚೋಣಗರ್ಗ್ಗುತ್ತಿರೆಕಂಡು ನರಿಕೋಪದಿಂರಾಕ್ಷಣದೊಳು॥೪॥ಘಾ
ಳಿಡತ್ತಿಕುಕ್ಕಗಳಿಂಜನಿನಿನಾದದಿಂ। ಸಾಲ್ದೆಡೆತ್ತಿವಿಕಣಂಬಾಣಮಂಪಿ
ಡಿದಿಂತು ।ಘಾಳಿಡಿಸಿನಮ್ಮಬಲಮಂಕೊಂದು ಬೆಮಾರ್ಗ್ಯರಂಕಟ್ಟಿ
ದಾತನೊಡಲಂ॥ ಸೀಳ್ದು ರಕ್ತಾಬಲಿಗೊಡೆಂದೆಸಲು ವೀರಬಲ।ದಾಳಿ
ಡು ಕುದೊಳ್ಕರಿತುರಂಗರಥಸಂದಣಿಯು, ಮೇಲಿಡದವಂಬುಗಳ್ಪರಿದ
ಮರುಣಾಂಬುಗಳ್ಪೇಳಲೇನಕ್ಕೆರಿಯನು ॥೫॥ ಅಂಬುಜಾಂಬಕನಂದು
ಬೆಂಬಿಡಿನ್ರತುಟ್ಟಿಕ।ಣಾಂಬದಂತೆಗೆದುಬಿಟ್ಟಂಬುಗಳ್ಗನಮಂ।ತುಂ
ಬಿದವುಗೆಸೆಗಳೊಳ್ಮ್ಯಂಬರಿಗವೀಂಟದವ್ರ ಜಾಂಬೊಳೆಯನಬ್ಜಾರ್ಕರ
ಳಾ॥ಬಿಂಬಮುರಿಪುತ್ತೆವಿಶ್ವಂಭರೆಯುಸುತ್ತಮು । ತ್ತುಂಬಲಿಬಾಪ್ರಾ
ಳಿಸಪ್ತಾಂಬುಧಿಯುಸುಭಟದೇ। ಹಂಜೊಕ್ಕುಬಂಡಮಂತಿಂಬವೆನೆಕ
ವಿದವೇನೆಂಬೆನಾಹರಿಯಘಟನು ॥೬॥ ತಾಗಲಾನೆಗಳಗಳಮಂವಾ
ವುತರ್ಘರಿಗೆ। ಮುಗೂರಿಬೀಳೆತುರಗದಮೊಗಂಮೊಗಬ। ಮಾಗಗ
ಗನಕಿಟಗಿಯೆರಾವ್ರತು ತರತೆರದಕೈಣಾದ್ಗಮರಸಿಬೀಳೆ॥ ಮೇಗೆಂಥಿ
ಕಾಳಿಕಾಳಿಕೆಗಾರೆಜೀವನಂ । ಬೋಗಿಭೋಗಿಸೆಸುಭಟರಮರಿಯ
ರೊಳೆಮರಿಜಗ। ರಾಗರಿಯಮಾಯುವಾಯಾಸಮಂಬೀರೆಬೀರಿದನ
ಚ್ಯುತಂಕಣೆಗಳಂ॥೭॥ನಾರಾಯಣಂಮುರಾರೋಷದಿಂದೆಸುತಿರ್ಪ।
ತೋರಾಯುದೆಸುಗೆಯಂತರಹರಿಸದಾಕ್ಷಣಂ। ಪುರಾಯಘಾಯದಿಂ
ಬಲಮಳಿಯೆಕಂಡು ಸಂಪಾರಾವತಾರನಾಗಿ ॥ ಸಾರಯಶನಿವನಾವ
ನೋರಣಕೆಲೇಸುಲೇ । ಸಾರಯಲಿವಂಗುಣಕೆಮುತ್ಸರವೆಸೊತಹರಿ।

ಸಾರಯದೊಳೀರಥವನಲ್ಲಿಗೆಂದೀಶ್ವರಕುಮಾರಕಂ ನೇಮಿಸಿದನು॥೮
ಇದೆವಜ್ರಗಿರಿವಜ್ರನಗ್ನಿವನದಾವಾಗ್ನಿ। ಇದೆಯಮಯಮನಿರು
ತಿಸಿಂಹಸಿಂಹಾರಿಮ। ತ್ರಿದೇವರುಣತ್ರಿಮಿರತಿಮಿರಾಪಸ್ಪೃತ್ಪವಮಾನ
ಮೋಘಪವಮಾನನಿದಕೊ॥ ಇದೆಕೊಯಕ್ಷೇಶಗಜಗಜಮಥನನಿದೆ
ಬಂದ॥ನಿದೆಬೊಮ್ಮಮದನಮಗನಾರಿವೀರಂಬಂಗ। ನಿದೆಕಂಡುಬ
ದುಕೆಂದುಪಂದಿಗಳ್ಪೊಗಳೆಸರಿಯುಂತಡೆಗನಾವೀರನು॥೯॥ ಅಚ್ಚರಿ
ಯನೀನಿನ್ನ ಬಾಣವಿತ್ತುವುಮನಕೆ।ಕಚ್ಚಿದೆಯಸುಭಟನೀನಾರ್ನಿನ್ನ
ಪೆಸರದೇ। ನುಚ್ಚರಿಸುಧಿಟ್ಟಹೆಯಾಂಗೆಲ್ದವರೊಳೆಂದುವೀರನೆಚ್ಚಂ
ಬುಗಳನು॥ಕೊಚ್ಚಿನಸುನಗೆಯೊಳಗೆನೀನೆನ್ನ ಸಾಹಸಕೆ। ಮೆಚ್ಚಿಫಲ
ಪೆಂಬೇಗದಿಂಸುರರಸೆರೆಗಳೆಂ।ಬೆಚ್ಚರಂಬಿಟ್ಟುನಡೆಯಾನಚ್ಯುತಂತಾ
ಳ್ವನಲ್ಲೆಂದುತೆಗದೆಚ್ಚನು॥೧೦॥ನಕ್ಕನಾನುಡಿಗೆವೀರಂಸುರರನೀಂಬಿಡಿ
ಪೆ।ಕಕ್ಕುಲತೆಯೊತಕನತಾರಂಗಳೊಳ್ಬರ್ಪ। ಲೆಕ್ಕಮಾಸುರುಪೆನಿ
ನ್ನನೆಸವಚ್ಯುತಶ್ಸಂನಾನಾಡಲೇಕೆನಿನಗೆ॥ ಸೊಕ್ಕೇರಿತಾಯಾಗಪ
ಶುರುಚಿಗಳಿಂದದಂ। ಕಕ್ಕಸುಪೆನೀಕ್ಷಣಂನೋಡೆನುತೆಕಣೆಗಡಿದು।
ಕಕ್ಕಸದಬಾಣಪ್ರಂಬತ್ತರಿಂಸರಿವರೂಥವನೆಚ್ಚುಬೊಬ್ಬಿರಿದನು॥೧೧
ತೇರ್ತಿರುಗುತಾಗಸಕೆಪೋಗಿಬಳಿಕುಗ್ರನೇ। ಸರ್ತಾಗಲುರಿದುಬೀ
ಳ್ಪನಿತರೊಳ್ಮಾಧವಂ। ಮಾರ್ತೇರನಳೆವಡಿಸಿಬಳಿಭಾಪ್ರವೀರೇಕ
ನಿನ್ನ ಸರಿಸಾಟಿಮರ್ತ್ಯರು॥ ವರ್ತಿಸುವರಾರ್ಜಗದೊಳೆಮ್ಮಬಾಣಂಗ
ಳತಿ।ಧೂರ್ತತೆಯನೀಕ್ಷಿಸೆಂದೆಸೆಯುಲ್ವತರುತಿರ್ಪ।ಕಾರ್ತಸ್ವರಾಂ
ಕಿತಶರಂಗಳಂಕತ್ತರಿಸಿಮಾಧವಂಗಿಂತೆಂದನು॥೧೨॥ ಪಕ್ಷಿವಾಹನನ
ನಿನ್ನನಾಂಕರುಣದಿಂಜೀವ। ಮಾತ್ರದಿಂಬಿಡುವೆನೆಂದಿರ್ಪೆನ್ಯಸೆನಗಸ
ಮ।ಶತ್ರುವೇನೀನೆನುತೆಬತ್ತಳಿಕೆಯಿಂದೆಮಸೆವೆತ್ತಂಬನ್ಯದನುಗಿ
ದು॥ಛತ್ರಚಾಮರಸಿಂಧುಸೀಗುರಿವರೂಥಂಗಳ್।ಚಿತ್ರರಥಸಾರಥಿಗಳಂ
ಕಡಿದುಪಂಕೇಜ। ಪತ್ರಾಂಬಕನಪಣೆಯನೊಂಬತ್ತುಬಾಣದಿಂಕಡೆ
ಯೆಚ್ಚುಬೊಬ್ಬಿರಿದನು॥೧೩॥ ಹಾರಿಬಿದ್ದಂನೆಲಕೆನೀಲಗಿರಿಬೀಳ್ವಂ
ತೆ।ಕಾರಿದಂರಕ್ತಮಂಜೀವನಂನಡುನೆತ್ತಿ। ಗೇರಿದುದದಂಕಂಡುವೀ
ರಭದ್ರಂಶಿವಮಪಾದೇವಪಿತನಾಜ್ಞೆಯಂ॥ ಮೀರಿತೆಂಮುಘಟೆಂದುಸರಿ
ಯುಸರನಾರೈದು। ತೋರೆಶೈತ್ಯೋಪಚಾರಂಗಳಂಕಣ್ದೆರದು। ಮಾ
ರುದ್ಗಿಕೈಗಳಂವಿಷಣ್ಣವಾಗ್ಭಟಸಿಕೋಪಾಟೋಪದಿಂದೇಳ್ದನು॥೧೪॥ ಆ
ಕ್ಷಣಂಬಂದುದಾಹರಿಗೆಮಣಿರಥವದಂ।ತೀಕ್ಷಣದೊಳಡರಲಸ್ತ್ರಭ್ಯಾ
ಸವಂಹರಿಗೆ। ಶಿಕ್ಷಿಸುವನೋವೀರನೆಂಬಂತೆಕಾದುತಿರಲಭವನಿವರ

ತ್ರಿಸಮರವಂ ॥ ಈಕ್ಷಿಸುವೆನೆಂದಳ್ತಿವಟ್ಟು ನಭದೊಳ್ನಿಂದು । ಪೇಕ್ಷೆಯಿಲ್ಲದೆಭೃತ್ಯಪುತ್ರರಥಟಂನೋಡೆ। ಸಾಕ್ಷಾಜ್ಜಗದ್ರಕ್ಷಸಂಹಾರಕರೊಪ್ಪಯ್ದರೇನೆಂಬೆನಚ್ಚರಿಯನು ॥೧೫॥ ಸಂಗರಂಸಮನಾಗುತಿರೆಕೋಪದಿಂದವೀ। ರಂಗರುಡವಾಹನನವಾಹನಚತುಷ್ಕಮಂ। ಮುಂಗಡೆಯಸೂತನಂಸಿಂಧುಸೀಗುರಿಛತ್ರಚಾಮರಮಹಾಧನುವನು ॥ ಪಿಂಗದೈನೂರಪ್ಪೊಳೊಳಂಕಡಿದುವಿಷಣ್ಣವಂ। ಭಂಗಿಸಿಧರಾತಳಕೆಮೂರ್ಛೆಯಿಂಕೆಡಪಿಚತು। ರಂಗವಂಕೊಲತೊಡಗಿದಂಕರುಣೆಯೋರುದ್ರಪುತ್ರನೆಂಬೋಲ್ವೀರನು ॥೧೬॥ ನಿಡುಸರಳಸಾರದಿಂಘೋರದಿಂಭಾರದಿಂ। ದಡೆಗೆಡದಸೇನೆಯಿಂವಾಸೆಯಿಂಬೇನೆಯಿಂ । ದೊಡನೆಧರೆಗುಳ್ವರಿಂನಳ್ವರಿಂತೆಳ್ವರಿಂತಮತಮಗೆಕಂಡಕಡೆಗೆ॥ ಕಡಿವಡದಕೊರಳಿಂದೆಕರುಳಿಂದೆಮರುಳಿಂದೆ। ಸೊಡೆವೊಡೆದಸುರರಿಂದೆಸುರರಿಂದೆನಗರಿಂದೆ। ಮಡರಿದಭೀತಿಯಿಂಗಾತ್ರಿಯಿಂಹೇತಿಯಿಂದಾರಣಾಂಗಣಮೆಸದುದು ॥೧೭॥ ವರನದಿಗಳಂತೆಕೀಲಾಲಮಯವಾಗಲಬ್ಧಿ। ಪುರದಂತೆಕೌಶಿಕವಿಲಾಸಮಯವಾಗೆವ। ಸ್ವರವರ್ಗದಂತೆವಿಕ್ರಮಪರಾಭವಯುಕ್ತಮಾಗಲಾಸರಸಿಯಂತೆ॥ ನಿರುತಮಳಿಗಳಪದ್ಮಮಯವಾಗಲಂದಮರ। ಗಿರಿಯಂತೆಸುರಗಣವಿಮಾನಮಯವಾಗೆಸಾ। ಗರದಂತೆ ವಡಬವಾರಣಭಂಗಮಯವಾಗೆರಣಭೂಮಿ ಕಂಗೆಸದುದು ॥ ೧೮ ॥ ಜವಮಯಂಬೆಂಗೊಟ್ಟಭಟರಕಿಕ್ಕಿರಿದಿರ್ದ । ಶವಮಯಂನೆಣನನೆತ್ತರಬಸೆಯಜಿಗಿಯರ್ಲ । ರವಮಯಂನೆರದಪಕ್ಷಿಕಾಕಘೂಕಬಕಶುನಕಜಂಬುಕತತಿಗಳ ॥ ರವಮಯಂಶಾಕಿನಿಪಿಶಾಚಡಾಕಿನಿಯರ । ಸ್ತವಮಯಂಮುರಿದತೇರ್ಗಡಿವಡೆದಹಸ್ತಿಸ್ತ್ಯಂ। ಧವಮಯಂತಾನೆನಿಸಿ ವೀರೇಶನಿರಿದ ರಣಮಂಡಲಂಕಂಗೆಸದುದು ॥೧೯॥ ಸುರರಮುಂಡಗಳಹಸೆವಣೆಗಳೊಳ್ಕುಳಿತುಕೆಂ। ಕೆಂಗರುಳಬಣ್ಣದಬಾಸಿಗಂಗಳಂಧರಿಸಿಪೊಸ । ತೊರಳೆಗಳದಂಡೆದೊಂಡಲ್ಗಳಂಮುಡಿದುಮೇಲ್ಗಳತೊಡಂಗಳನೆತೊಟ್ಟು ॥ ನರದಕಂಕಣದಾರಮೆಸೆಯೆಶೋಭಾನಮಂ। ನರಿಗಳಂಪಾಡಿಸುತನೆತ್ತರೋಕುಳಿಯಾಡಿ । ಮರುಳಮದವಕ್ಕಳೆಸೆಯುಲ್ವೀರನಿರಿದಸಮರಾಂಗಣದೊಳೇನೆಂಬೆನು ॥೨೦॥ ರುದ್ರಾತ್ಮಜಂಮಹಾಕೋಪದಿಂದಾಬಲಸ। ಮುದ್ರಮಂಕಲಕುತಿರೆಲಕ್ಷ್ಮೀವರಂಸಮರ। ನಿದ್ರೆಯಿಂದೆಚ್ಚೆತ್ತುಬಹುರೋಷದಿಂದಘುಡುಘುಡಿಸಿದಿವ್ಯಾಸ್ತ್ರಂಗಳ ॥ ಉದ್ರೇಕದಿಂದೆಸೆಯೆತುಡುಕುವಶರಂಗಳಂ। ಛಿದ್ರಿಸಿದನೊಂದುಳಿಯದಂತೆಭಾ

ಪುರವೀರ | ಭದ್ರನಿದಿರೊಳ್ ಕಾದುತಿರ್ಪರಾತ್ರಿಗೆ ವಿಜಯವೆಂತೆಂ
ದುಸುರರುಲಿಯಲು ॥೨೧॥ ನೋಡಿದಂ ವೀರನಾಟೋಪಮಂ ಕೋ
ಪಮಂ | ಮಾಡಿದಂ ವೈಷ್ಣವಾಸ್ತ್ರಮನಾಗಚಾಪದೋ | ತೂಡಿದಂ
ವೀರಭದ್ರನ ಸರಿಸದೊಳ್ಬಿಟ್ಟ ಸಕಲಲೋಕವನುರಿಯೊಳ್ ॥ ಕೂ
ಡಿದಂ ಬರ್ಪ ಬಾಣವನಿವಂ ಖಂಡಿಸೀ | ಡಾಡಿದಂ ರುದ್ರಾಸ್ತ್ರದಿಂ ಮ
ತ್ತೆ ಖತಿಯೊಳೋ | ಆಡಿದಂ ಶರಿಯೆನ್ನನಳೆಸಿದಫಲವನುಣ್ಣೆನುತ
ಚಕ್ರದೊಳಿಟ್ಟನು ॥೨೨॥ ಬಿಟ್ಟಿದವು ನಿಖಿಳಲೋಕಂಗಳಾ ಕ್ಷಣದೊಳು
ರೆ | ಮುಟ್ಟಿದವು ಸೂರ್ಯಕಿರಣಂಗಳಾಕಾಶದಿಂ | ದುಟ್ಟಿದವು ತಾರೆಗ
ಳ್ಗ ರಣನಡುಗಿತು ಸಪ್ತಸಾಗಂಗಳ್ಕದಿಯಲು ॥ ಕಿಟ್ಟನುಗುಳುತೆ ಬರ್ಪ
ಘನಚಕ್ರಮಂ ನಡುವೆ | ಕೊಟ್ಟಿನೂರ್ಕಡಿಮಾಡಿ ಕೈಯೊಡನೆ ವೀರೇ
ಶ | ನೆಟ್ಟು ಹರಿರಥಸೂತತುರಗವೊದಲಾದವಂ ಸವರಿದಂ ಸಾಹಸದೊ
ಳು ॥೨೩॥ ಕಿರಣವಿಲ್ಲದ ಸೂರ್ಯನಂತೆ ಬರಿಕೈಪರಿದ | ಕರಿಯಂತೆ ದಂ
ತಂಗಳುಡಿದುರಗನಂತಸುರ | ಹರನತಿಭಯಂಗೊಂಡು ತಾಂಗೆಲವು
ಪಾಯಮಂ ಕಾಣದತಿವೇಗದಿಂದಂ ॥ ಎರಳೆಯಾಕಾರದಿಂದೋಡುತಿ
ರಲ್ಕಂಡು | ಶರಸುತಂ ಕಡುವೇಗದಿಂದೊಂದು ಬಾಣಮಂ | ಹರಿಗಿಡೆ
ಬ್ಬೇಗದಿಂ ಬೆಂಬತ್ತಿ ಸರಳೆಗಳೆಯಂ ಕೆಡಪಿತಂ ಕ್ಷಣದೊಳು ॥೨೪॥ ಪಟ್ಟಳೆ
ಮನೊಡೆದು ಬಳಿಕಾಸುರಳು ನೆತ್ತಿಯೊಳ್ | ಗುಟ್ಟಳಿಸಿದುದು ಬಳಿಕಾತ್ತ
ಹರಿಣನುರೆ ನೆಲಂ | ಗಟ್ಟಿ ನೆತ್ತರ್ಗರಿಬಾಯ್ಯಿಡಲ್ವೀರಭದ್ರಂ ಮುಹಾಕ
ರುಣದಿಂದಂ ॥ ಸಟ್ಟಿಗಾ ಸಂದರೊ ಪಂತೋರಿ ವಿಷ್ಣುವಂ | ಬಿಟ್ಟಬೇಡೇ
ಳಾಪ್ರಣಮಂ ಕಾಯ್ವೆನೆಂದೆಂಬ | ಮಚ್ಚರಿದು ನಿಜರೂಪಿನಿಂ ವೀರಭದ್ರ
ನಂ ತುತಿಸಿದಂ ಭಕ್ತಿಯಿಂದಂ ॥೨೫॥ ಜಯಜಯ ಸುಚಾರಿತ್ರ ಭವಗು
ಣಾಂಬುಧಿ ಜೈತ್ರ | ಜಯಜಯ ವಿರಾಡ್ರೂಪ ಹಸ್ತಮಂಡಿತಚಾಪ | ಜ
ಯಜಯ ಸುಜನಪಾಲ ದುಷ್ಟನಿಗ್ರಹಶೀಲ ಜಯಜಯ ಸುಭಕ್ತಭಕ್ತ | ಜ
ಯಜಯ ಶುಭಾಕಾರ ಜನನಮರಣವಿದೂರ | ಜಯಜಯ ನತೋದ್ಧ
ರಣದಕ್ಷಮುಖಸಂಹರಣ | ಜಯಜಯ ಸುಫಣಿಭೂಷ ವೀರೇಶ ಸರ್ವೇ
ಶ ಜಯಜಯತು ಸಲಹೆಂದನು ॥೨೬॥ ಸಾಹಸ್ರವದನ ರಕ್ಷಿಸು ರಕ್ಷಿಸೆ
ನ್ನಂತ್ರಿ | ಸಾಹಸ್ರನಯನ ರಕ್ಷಿಸು ರಕ್ಷಿಸೈ ಯುಗಳ | ಸಾಹಸ್ರಬಾಹು ರ
ಕ್ಷಿಸು ರಕ್ಷಿಸೈ ನಿನ್ನ ಮಹಿಮೆಯಂ ಬಣ್ಣಿಸುವಡೆ ॥ ಸಾಹಸ್ರವದನರಗಣಿ
ತಕೋಟಿ ತಂಮ ಯುಗ | ಸಾಹಸ್ರ ಜನ್ಮಯಂ ಪೊಗಳಲಾರ್ಪರಯೆಂ
ದು | ಸಾಹಸ್ರನಾಮದಿಂ ನುತಿಸುತಿರೆ ವಿಷ್ಣುವಿಗೆ ವೀರೇಶನಿಂತೆಂದನು ॥
ಬರ್ಪುದಾ ಮಾಗಲುಂ ಬಾರದಿರದೈಸೆ ಕಂ | ದರ್ಪಪಿತ ನಿಂನೋಯುಲೇಕೆ

ಖುಳದಕ್ಷನಸ। ದರ್ಪಮುಖವಂನೋಳ್ಪೆವೆಂದೆನಲ್ಕೇಳಿಹರಿಭಯಭರಿತ
ವಕ್ತ್ರಯಿಂದಂ॥ ಸರ್ಪಭೂಷಣನೆಯುಜ್ಞಾದಿಸತ್ಕರ್ಮದಿಂ । ದಿರ್ಪವರಕ್ಷ
ತ್ಯಕೀಳಪಟಕೃಷ್ಣಾಜಿನಂ। ಬರ್ಪಂತೆಗೆಯ್ವುದೆನಲೊಪ್ಪಿವೀರಂಸೀ
ಳಲನುಗೆಯ್ದನಾದೇಹವುಂ ೨೯॥ ಸರಸರನೆಸೀಳ್ದುಚರ್ಮಂದೆಗೆವುತಿ
ರ್ದನವ। ನರಿಕೆಯುಂಜಪೆಹೋಮಯಜ್ಞಾದಿಕರ್ಮದೊಳ್। ತ್ತರಿಸಂದುಭ
ಕ್ತಿಯಿಂಬಳಸಿದಪರವರವರದುಷ್ಕರ್ಮಪಾಶಂಗಳು॥ ಪರಿವಟ್ಟವೋ
ಗಳೆಂದಧಿಕವರವಿಶ್ರಾಮವುಂ । ದುರುವಳಬ್ಬಿವಸೆಣಸುತಿರಲಿತ್ತಲತ್ತರ
ಸ। ವರತನಾಕಿಗೆಗೊನೆಯುಗೂತರ್ಲ್ತಂದುದೀಕ್ಷಿತನವುಂದಿಂತೆಂದ
ರು॥ ಜೀಯಬಿಡುದೀಕ್ಷೆಯುಂವೀರನೋಳ್ಕಾದಿನಾ। ರಾಯಣಂಶರಣೆಂ
ದುಜೀವಿಸಿದನಿನ್ನೇನು। ಪಾಯವುಂಕಂಡಪೆಶರಣ್ಪೊಗುವೆಯೊರ
ಣಂಬೊಗುವೆಯೋಪೇಳೆಲ್ಕೆ॥ ವಾಯುಸಖನೋಳ್ತಪ್ಪವುಂಪೊ
ಯ್ದ್ರೋಲ್ದನ್ನ। ಕಾಯದೊಳ್ಭುಗುಭಗಿಲೆನುತ್ತುರಿವಶಿಖಿಯಭಾ।
ರಾಯಸವಾನಸನಾಗಿದಕ್ಷನಾಕೆಲಬಲದವುಂತ್ರಿಗಳೊಳಿಂತೆಂದನು॥
ಅದಳಿದರೇಂಮುರಳಿಪಡೆವಬಲ್ಪಂನೊಳಿರೆ। ವೀರನೇಂಗಹನವುವನಂ
ಗೆಲ್ವುದೇಂಯಾಗ। ಭಾರದಿಂದಾನಿರರ್ಕ್ಕಂತಾದುದೆಂದುದಕ್ಷಂವುಹಾ
ಕೋಪದಿಂದಂ॥ ಬೂರಂಸವಿಾರನಂಗೆಲ್ವಶಕ್ತಿಯುಂತೆನೀ। ಹಾರವಗ್ನಿ
ಯನಟ್ಟಬಾಳ್ಕೆನೆಂಬಂತಿರ್ದ। ನಾರಾದೊಡಂಭಲಗ್ರಹಗಳಜ್ಞಾನರಾ
ಗರೆಲೋಕದೊಳಗೆಂದನು ॥೩೦॥ ಬಿಟ್ಟನಾಮಂತ್ರದುಷ್ಕರಣೆಯುಂಥ
ವಿಗಳಂ। ತೊಟ್ಟನಿಳೆಗಿಳಿಪಿದಂದಕ್ಷನಾಕ್ಷಣದೊಳಗೆ॥ ದಿಟ್ಟನಾಗುತೆಪ
ಡೆದಬಿಳಿಚತುರಂಗವುಂತನ್ನವೊಂವುಗ್ಗಳಿನಿವ॥ ಬೆಟ್ಟದಂತೊಪ್ಪು
ತಿರ್ದ್ದತಾರೋಟದಗ। ಜಟ್ಟರಕ್ಷಸಘೋರಗಳಂಕರೆಸಿನೇಮವುಂಕೊ
ಟ್ಟುಕಳುಪಿದನತ್ತಲತ್ತದಕ್ಷಂಗವಿಗಳಂಬೇಳುತಿರುತಿರ್ದನು॥೩೧॥ ಕಾ
ಳಹೇಘೌಳಿನಡೆದಪವ್ರೇಕ್ಷ್ಯಕಾಲ್ಮಡಿ। ನೀಲಾದ್ರಿಗಳ್ತಳೆರ್ದ್ದಪವ್ರೋಕ
ತ್ತಲೆಬಂದು। ವೇಲಾದಬಹುರೂಪವುಂಧರಿಸಿಸಂದಣಿಸಿಪೋಪವೋ
ಪೇಳೆನಲ್ಕೆ॥ ವೇಳದಿಂತಾರಕನಿಶುಂಭದಂಭಾಸುರಾ । ಭೀಳಧೂಮ್ರಾ
ಕ್ಷಮಹಿಷಾಸುರಮುಖಪಾಪಪ। ಶೀಲಚಂಡಾಸುರಕರಾಳರೆಂಬತುಳ
ದಾನವರೊದಗಿದರುಚಣದೊಳು ॥೩೨॥ ಶರಭವುಂದುಭಿಹಯಗ್ರಿ
ವಗತವಾಯಗಜ। ಶಿರಗಗನವುಂಧಿಸರಾಭನುವೃಷಪರ್ವದು। ರ್ದ್ದರ
ವಜ್ರನಾಭವಿದ್ರಾವಣವುಹಾನಾಭಶಂಕುಕರ್ಣಲ್ಪಬಾಹು॥ ವರವುಹಾ
ಬಲಹಿರಣ್ಯಾಕಶುಪುಹಿರಣ್ಯಾಕ್ಷ। ಇರಶುಂಭವುಯುಶಂಖುಶಿರನವು
ಟಿಕಾಳಿಕೇ। ಯರಘನನಿವಾತಕವಚರಹಿಂಡುಪೌಲೋಮಿಗಳತಂ

ದೆನ್ನುತಂದುದು ||೪೪|| ಇತ್ತಲಾ ಮರುಳತಂಡಂ ಯಾಗಶಾಲೆಯಂ| ಮುತ್ತಿ ಕಾವಲಭಟರ್ಗಳ ಸದೆದು ಬಾಗಿಲಂ| ಕಿತ್ತು ದಳದುಳಿಪನಿತರೊಳ್ದಡಿಗರಕ್ಕಸರ್ಕಂಡು ಕಡುಖಾತಿಯಿಂದ|| ಕಿತ್ತು ಬಲ್ಕೈದುಗಳನೆತ್ತಿ ಜಡಿದಬ್ಬರಿಸು| ತ್ತೊತ್ತಿವರಿದಿರಿದು ಜುಂಡಿಸಿ ಕೊಟ್ಟೆ ಕೊರಕೊರದು| ಕತ್ತರಿಸಿ ನಾನಾಪ್ರಕಾರದಿಂ ಕೊಲುತಿರ್ದರೇನೆಂಬೆನದ್ಭುತವನು ||೩೫|| ಬರಸಿಡಿಲ್ಗಳಾಗಿ ಮಳೆಯಾಗಿ ಬೆಟ್ಟಗಳಾಗಿ| ಸರಿಗಲ್ಗಳಾಗಿ ಗುಂಡುಗಳಾಗಿ ವೃಕ್ಷಗಳಂ| ಕೊರೆವ ಕರಗಸವಾಗಿ ಪುಲಿ ಕರಡಿಯಾಗಿ ಕೇಸರಿಯಾಗಿ ಘೋರವಿಷವುಂ| ಕರೆವಹಗಳಾಗಿ ಶಿಖಿಯಾಗಿ ಕತ್ತಲೆಯಾಗಿ| ಬಿರುಗಾಳಿಯಾಗಿ ಬಿಸಿಲಾಗಿ ನಾನಾವಿಧದ | ತರಿವ ಶಸ್ತ್ರಾಸ್ತ್ರಂಗಳಾಗಿ ಮಾಯೆಯೊಳುರುಬಿ ರಕ್ಕಸರ್ಕೊಲುತಿರ್ದರು ||೩೬|| ಪಿಡಿಪಿಡಿದು ರಕ್ಕಸರ್ಮರುಳುಗಳ ಬಾಯ್ಗಳೊಳ್| ಗಡಸಿನುಂಗಳ್ಕಿವಿಗಳೊಳ್ಮೂಗಿನೊಳ್ಕಂಣ, ಕಡೆಗಳೊಳ್ಪೊರಮಟ್ಟು ನೆಗೆದು ನೆತ್ತಿಯನೇರಿ ಪಲ್ಗಳಿಂದಾದನುಜರಂ|| ಕುಡಿಮೂಗನುರೆ ಕಚ್ಚಿ ಕಿವಿಗಳಂ ಕೀಳ್ತು ಕೈ | ಯೊಡನೆ ಕಿವಿಮೂಳೆ ಮೂಕೊರೆಯರಂ ಮಾಡಿ ನೆರೆ | ಪಿಡಿದಾಡುತಿರ್ದರೊಡನೆರಸಿಯಾದನುಜರುಂ ಮರುಳ್ಗಳುಂ ತಕ್ಷಣದೊಳು ||೩೭|| ಏರಿದರ್ಕೀರಿದರ್ಬೆಟ್ಟದೋಲ್ಗಾಳಿಯೊಳ್ | ತೂರಿದರ್ಪಾರಿದರ್ನಭದೆಡೆಗೆ ಬಲ್ಮೆಯಂ| ಸಾರಿದರ್ಮೀರಿದರ್ಶಿರಂಗಳಿಂ ಪೊಯ್ದು ಪೊಯ್ಲ್ಗಳ್ ನೊರೆನೆತ್ತರ್ಗಳಂ || ಕಾರಿದರ್ಪೀರಿದರ್ಭಯರಸವನೊಡನೆ ಬಾ| ಯಾರಿದರ್ಕೀರಿದರ್ಸಿಡಿಲಂತೆ ಕೌತುಕಂ | ದೋರಿದರ್ಮಾರಿದರ್ಮೃತ್ಯುಗಳೆಂದನುಜರುಂ ಮರುಳ್ಗಳುಮದೇನೆಂಬೆನು ||೩೮|| ಈ ಪರಿಯೊಳೀರ್ಬಲಂ ಕಾದುತಿರೆ ರಕ್ಕಸ| ರ್ಕ್ಷೇಪದಿಂ ಹೂಂಕರಿಸಿ ನೂಂಕಿದನು ಜಾಳಿಪ್ರ| ತಾಪದಿಂ ನಾನಾಪ್ರಕಾರದಿಂ ಸ್ತ್ರೀಡನೊಡನೆ ವೀರಭದ್ರನ ಬಲವನು|| ಆಪನಿತನುರೆಸದೆವುತಟ್ಟಲತಿಭೀತಿಯಿಂ | ದಾಪಂಥಮುಡುಗಿ ಕಡುವೇಗದಿಂ ಭದ್ರಕಾ| ಳೀಪತಿಯ ಮರೆಪೊಕ್ಕುದಖಿಳಸೈನ್ಯಂ ಪೇಳ್ವುದೇಂ ದನುಜರುಬ್ಬಟೆಯನು ||೩೯|| ನೋಡಿದಂ ವಿಸ್ಮಯರಸಾಬ್ಧಿಯೊಳು ಮಿಗೆ ಮುಳುಂ | ಗಾಡಿದಂ ವಿಷಣ್ಣವಂ ಕರದು ನಸುನಗುತ ಮಾ | ತಾಡಿದಂ ವೀರನಾ ದಕ್ಷಸಭಕ್ಕ ಮನದೊಳು ಮುಟ್ಟಿ ಕೋಪದಿಂದಂ || ಪೂಡಿದ ಸರಳ್ಗಳಂ ತೆಗೆದೆಚ್ಚು ವಿರಥರಂ| ಮಾಡಿದಂ ದೈತ್ಯರಂ ಮುತ್ತಖಿಳಸೇನೆಯಂ| ಕೂಡಿದಂ ಪೆಣನ ಮೆದೆಗಳೊಳೊಂದು ಚಣದೊಳೆಲೆ ರಾಮ ಕೇಳ್ ಕೌತುಕವನು ||೪೦|| ದುಂದುಭಿಗೆ ನಾಲ್ಕು ಶರ ಭಂಗೈದು ತಾರಕಂ| ಗೊಂದು ಸರ್ಭಾನು ವೃಷಪರ್ವಗೆ ನಾಲ್ಕು ನಾ| ಲ್ಕೊಂದು ಶಲಭಂಗೆಂಟು ಗಗ

ಸಮೂರ್ಧ್ನಿರ್ಗೆಪತ್ತುಶತಮಾಯುಸಮುಚಿಹಯುದ॥ ಕಂಧರಗೆಱಂ
ಟೆಂಟುಕುಂಭಜಂಭಗಿರ್ಪ್ಪ। ತೊಂದಾಹಿರಣ್ಯಾಕ್ಷಧೂಮ್ರಾಕ್ಷಕಗೆಱ
ಪಂ। ನೊಂದಿಂತಸಂಖ್ಯಾತಬಾಣಂಗಳಿಂದೆಲ್ಲರುಮನೆಚ್ಚು ಬೊಬ್ಬಿ
ರಿದನು ॥೪೧॥ ಎಲೆಸಿದ್ಧರಾಮ ಕೇಳಾವೀರನಂಬುಗಳ। ಮಳೆಗಳಿಂನ
ನೆಯದವರಿಲ್ಲನಾರಕ್ಷಸರ। ಬಲದೊಳಗೆಬಿಲ್ಲಾಳ್ಗಳಂಪಲಾಯನ
ಮನನುಕರಿಸಿಕಡುಭೀತಿಯಿಂದಂ। ಜಲದೋಳ್ಮುಳುಂಗಿಪುಲ್ಲಚ್ಚಿಪೇ
ವರ್ರಪುತ್ತ। ಗಳನೇರಿಕೈಗಳಂಮುಗಿದುಬಾಯೊಳ್ಬೆರ। ಳ್ಗಳನಿಟ್ಟು
ಕೈದುಮಂಪಾಯ್ಕುಪಾಯ್ದುಕರ್ಱಂಡಕಡೆಗದೇಂಮೆಂಣಿಸುವೆನು ॥೪೨॥
ಕಂಡನನಿಬರಕಾಲಬೇಗಮಂಕಗುಣದಿಂ। ದಂಡೆಳೆಯುಬಾರದೆಂದೆನು
ತಹಸ್ತದಸಲಗೆ। ಖಂಡೆಯುವನಿರದೆಝಳಪಿಸುತೆತೇರಿಂದಿೞದುಸಲೆ
ಭದ್ರಕಾಳಿಸಹಿತ। ಗಂಡುಗಲಿವೀರನಾಹೋಮಶಾಲೆಗೆಮರುಳೆ। ತಂ
ಡಪೆರಸ್ಫುರಿವಪಾಗ್ಯರವದೊಡನೆಬೊಂ। ಮಾಂಡಮಂತ್ರೀವೆಬರು
ತಿರ್ದರ್ನೆಡಬಲದವಂದಿಮ್ಯನಿಯಗಡಣದಿಂದಂ ॥೪೩॥ ಬಾಗಿಲೊಳಗಿ
ರ್ದಭೈರವನನುರೆಭಂಗಿಸುತ। ಬೇಗದಿಂಕಾಯ್ದಸುಭಟರಂಸದೆಬಡಿ
ದು। ಯಾಗಮಂಟಪದೆಡೆಗೆಪೊಕ್ಕುಚಾಡೇಶ್ವರಿಯಕರ್ಣಮಂಕಿ
ತ್ತುಕೊಡೆ॥ ರಾಗದಿಂಸಿರಿಯಮುಂದಲೆಗೊಯ್ದುಶಾರದೆಯ। ಮೂಗ
ನರಿದಾಶಚೀದೇವಿಗಚ್ಕ್ರತ್ತಿಮಿಗೆ। ನೀಗಿದಂಸ್ವಾಹಾಸ್ತನಂಗಳಂಮಿ
ಕ್ಕಸುರಸತಿಯರಂನಾಣ್ಗೆಡಿಸಿದಂ॥೪೪॥ ಕಟ್ಟಿವಿರಿನೋಳ್ಳೋಪರ್ಮಟ್ಟಿ
ಯುಮರುಳ್ಪ್ರುದುಷ್ಟಧೋತ್ರಂಗಳಂಸೆಳೆದುಭಂಗಿಸಿತೆಗದು। ಕಟ್ಟ
ತೋನ್ನನ ಶಿಖಿಯನೋರ್ವವನಗಡ್ಡಕಿತ್ತಿರುತಿರಲ್ಮರುಳ್ದಂಡಂ ॥
ಅಟ್ಟಳಿಯನೆಸಗಬೇಡೆಂದುಕೃಪೆಯಿಂಸಂತ। ವಿಟ್ಟುಮುನಿನಿಕರ
ಮಂಕಿವಿಯಪೂರಣ್ಣಾಹುತಿಯ। ಕೊಟ್ಟಪೆನೆನುತ್ತಿರ್ದದಕ್ಷನಶಿರಸ್ಸ
ಮಂಕುಟ್ಟಿಹೋಮದೊಳಿಟ್ಟನು॥೪೫॥ ಭೋಯೆಂತುನೆಗವಾಡಿತಾಮ
ರುಳಗಣವಿರದೆ। ಸಾಯೆಂದುದಕ್ಷನರಸಿಯರಳುತನಡೆತಂದು। ಕಾ
ಯೆಮ್ಮಕರ್ಣತಾಟಂಕಸೌಭಾಗ್ಯಮಂನೀನೆಂದುಬೇಡಿಕೊಳಲು॥
ಜೀಯೆಂದುಸರಿಯಜಬೀನ್ನವಿಸೆಕರುಣದಿಂ। ದಾಯಜ್ಞಪಶುಶಿರವನ
ರಿದುಪತ್ತಿಸೆದಕ್ಷ। ನಾಯತಮನಜಪುತ್ರನೆಂಬನಾಮಂಶಾಮ್ಯಮಾ
ದುದದನೇನೆಂಬೆನು॥೪೬॥ ಶಿರದಮುಸುಕಿಂದಕ್ಷನಂದುವೀರೇಶ್ವರನ।
ಚರಣಕೆರಗಲ್ಕಡೆಗಪೋಗೆಲವೋತಾಂಕೆಡುತ। ನರೆಯವರನೆಲ್ಲರಂಕೆಡ
ಪವರಮಾಳ್ಕೆಯಾಯ್ತೆಂದುನಿಂನೀವರ್ತನಂ ॥ ಶರನದಕೆತಕ್ಕುದಂ
ವಿರಚಿಸಿದನೆಂದವಂ। ವೆರಸಿಹರಿಯಜಮುಖ್ಯರೆಲ್ಲರುಂಬರೆಬಂದು। ಪ

ರಮುಕೈಲಾಸಮಂ ಪೊಕ್ಕೀಶ್ವರಸ್ಥಾನದೆಡೆಗೆ ಬಂದಂಕ್ರಮದೊಳು ||
ಕಡೆವಾಗಿಲೋಳ್ನಿಲಿಸಿಸಕಲರಂನಾರದನ | ನೊಡಗೊಂಡು ಪೋಗಿ
ವೀರೇಶ್ವರಂತನ್ನಪಿತ | ನಡಿಗಳ್ಗೆನಮಿಸಲು ಶಿವಂ ಹರುಷದಿಂತೆಗೆದು
ತಕ್ಕೈಸಿಮೊಯ್ದಡಹುತ || ಒಡನೆನಾರದನಿಂದವೃತ್ತಾಂತಮರಿದು ಮ|
ತ್ತಡಿಗಡಿಗೆಕರುಣರಸಮಿರದೆತುಳ್ಕಾಡಲಾ| ಮೃಡನೆಲ್ಲರಂಕರಸಿಪೆಡೆ
ಗೈಗಳಂ ಬಿಡಿಸೆ ತುತಿಸಿದರ್ಭಕ್ತಿಯಿಂದಂ ||೪೮|| ದೇವರಿಪುದೈತ್ಯಾವ
ನದಾವಹರಿಶಕ್ರರಾ| ಜೀವಭವಮುಖ್ಯನಾನಾವಿಬುಧಮುಕುಟರ|
ತ್ನಾವಳೀಬಹುಳಪ್ರಭಾವಪದಭಕ್ತಸಂಜೀವದೈವಾಧೀಶನೆ || ಪಾ
ವಕರವೀಂದುನೇತ್ರಾವಲಂಬನಲೋಕ | ಸೇವಿತಮಹಾವಿಷಗ್ರೀವ
ಕೈಲಾಸಶಿಖ | ರಾವಾಸಭೂತೇಶವೀರೇಶಪಿತನೆಸಲಹೆಂದು ತುತಿಯಿ
ಸುತಿರ್ದರು ||೪೯|| ಇಂತೆಂದು ನುತಿಪ ಹರಿಯಜಮುಖ್ಯದಿವಿಜರಂ|
ಸಂತಯಿಸಿನೀವೆಮಗವಿರಹಿತದಕಾರ್ಯದೆಡೆ| ಗಿಂತುಪೋಗದಿರಿನಿಂ
ಮಯುಶರೀರದಕೊಂಕುಕೊರತೆಗಳ್ಪೋಗಿಮಡಿದ || ತಿಂತಿಣಿಯಬ
ಲಮೋಳ್ಪದೆಂದೆಲ್ಲರಂಕಳುಪಿ| ಮುಂತಿರ್ದವೀರೇಶನುಗ್ರತ್ವಮಂಕಂ
ಡು | ಶಾಂತಿಯಂಮಾಡಿಸಿಜಗದ್ರಕ್ಷನಾವಿರೂಪಾಕ್ಷನಿರ್ದಂ ಮುದ
ದೊಳು ||೫೦|| ಇಂತೆಸವಚನ್ನಬಸವೇಶ್ವರಪುರಾಣಮಂ| ಸಂತಸದಿ
ಬರೆದವರ್ಗೋದಿದರ್ಗರ್ಥಮಂ| ದ್ಯಂತಮಂಬಿಡದೆಪೇಳ್ದರ್ಗೆ ಪಠಿಸಿದವರ್ಗೆ
ಭಕ್ತಿಯಿಂಕೇಳ್ದವರ್ಗೆ || ಸಂತತಂಸಕಲಸುಖಮಂಸಕಲಭೋಗಮನ|
ನಂತಸೌಭಾಗ್ಯಮಂಕೊಟ್ಟು ರಕ್ಷಿಸುವನಾ| ಕಂತುಹರನಪರಾವತಾ
ರನೆನಿಸುವಚನ್ನಬಸವೇಶನಳ್ಕರಿಂದಂ ... ||೫೧||

ಮೂರನೆಯಕಾಂಡದಲ್ಲಿ ೬ನೇ ಸಂಧಿಮುಗಿದುದು
ಅಂತು ಸಂಧಿ ೩೬ಕ್ಕೆ ಪದ ೧೬೪೪ಕ್ಕಂ ಮಂಗಳ.

೭ನೇಸಂಧಿ

ಸೂಚನೆ|| ಹರನಾಜ್ಞೆಯಿಂದೆ ಹರಿಹರಿಯಾಗಿರಕ್ಕಸನ| ಹರಿಸಿ
ಜಗಮಂಹರಿಸುತಿರೆಸರಿಯುಮೊರೆಗೇಳ್ದು| ಹರನಿರೂಪದೆಹರಿ
ಯುಹರಿಸಿದಂವೀರೇಶಶರಭಾವತಾರದಿಂದಂ||

ಪದ|| ಅಕ್ಷಯಾಕಾರಮೋಕ್ಷಾಗಾರಲೋಕಸಂ| ರಕ್ಷಖಳಶಿಕ್ಷ
ಛಕಾತ್ತಪೇಕ್ಷಭೀಮಭಾ | ಳಾಕ್ಷದಕ್ಷಾಧ್ವರವಿಪಕ್ಷಸುರಪಕ್ಷಪತ್ಯಕ್ಷ
ಪಾವನಸೊರೂಪ|| ಯಕ್ಷಪತಿಸೇವಿತಮಹೋಕ್ಷವಾಹನವರಮು|
ಮುಕ್ಷುವಂದಿತನಿರಾಪೇಕ್ಷಕಾಮಿತಪೂಜ್ಯ | ಪಕ್ಷಿಗಮನಾಕ್ಷಿಘನ
ನಿಕ್ಷೇಪಪದವಿರೂಪಾಕ್ಷತ್ರ್ಯಕ್ಷಸಲಹು ||೧|| ಆಲಿಸಿಸ್ನೇಹಸಿದ್ಧರಾ

ಷುಪ್ರಜವನೊಂದಂಬಿನಿಂ ಮುಂಬಿನಿಂ। ತಡೆಗಡಿದು ಬಿಡಲವಂ ಕೋಪದಿಂ ಚಾಪದಿಂ । ದೊಡಕವಿಸಿದವನಿಷುಸ್ತೋಮಮಂ ವ್ಯೋಮಮಂ ತಾಳೆದಿರಲಖಿಳಜನರು ॥೪೨॥ ಪೇಳಲೇಂ ಭಾಂಡಶತತಿಗೊಂದುಗುದುಗೆಯುಪೆಟ್ಟು। ಸಾಲದೇ ಖಳನೆಟ್ಟ ಮಾರ್ಗಣವ್ರಾತಮಂ। ಶೂಲಪಾಣಿಯ ಬಾಣವೊಂದೆ ಕಡಿದವನ ಕರಕಾರ್ಮುಕವನುಂ ಛಿದ್ರಿಸಿ॥ ಸಾಲಸೀಸಕಜೋಡು ಬತ್ತಳಿಕೆ ಕೈಪೊಡೆಯ। ಮೇಳವಂ ತರಿದಂಧಕಾಸುರನ ಗರ್ವಗಿರಿ। ಜಾಲಮಂ ಸವರಿದುದು ಶಿವನ ಬಾಣದ ಚಮತ್ಕಾರಮಂ ಪೊಗಳಲಳವೆ॥೪೩॥ ಚಂಡವಿಕ್ರಮನತುಳಕೋಪದಿಂದಂ ಹಲಗೆ। ಖಂಡಯುಂಗಳನಾಂತು ಪೊಯ್ವೆನೆಂದುಬ್ಬಿನಿಂ। ಖಂಡಪರಶುವನಿರದೆ ಮೇಲ್ವಾಯಲಭವಂ ತ್ರಿಶೂಲದಿಂ ದಿರಿದು ಬಳಿಕ॥ ಅಂಡಲೆವುತಾಕಾಶಕೆತ್ತಲಾ ಖಳನ ಮೈಯ್ಯ। ಯುಂಡ ರಕ್ತಂ ನಿಮಿಷಮಾತ್ರದೊಳು ಭೂತಳಕೆ। ಹಿಂಡಿಹಿಳಿದಂತೆ ಕರೆಯಲ್ವಿಗತಮದನಾಗಿ ಕೊಂಡಾಡಿದಂ ಶಿವನನು॥೪೪॥ ಜಯ ಸರ್ವಲೋಕಾಧಾರ ಜಯ ಕಾಲಸಂಹಾರ। ಜಯ ದಿವಿಜನುತಚರಣ ಜಯ ಭುಜಂಗಾಭರಣ। ಜಯ ಹುತಾಶನನೇತ್ರ ಜಯ ಮನೋಹರಗಾತ್ರ ಜಯ ಭೀಮವಿಧೃತಸೋಮ॥ ಜಯ ದನುಜಲಯಕಾಲ ಜಯ ಸಕಲಜನಪಾಲ। ಜಯ ವಿಜಿತಸಮವರ್ತಿ ಜಯ ಚಾರುತರಕೀರ್ತಿ। ಜಯ ದಕ್ಷಮಖಶಿಕ್ಷ ಜಯ ಜಯ ವಿರೂಪಾಕ್ಷ ಸಲಹೆಂದನಸುರೇಂದ್ರನು॥೪೫॥ ಇಂತೆಂದು ಕೊಂಡಾಡಿದಂಧಾಸುರಂಗೊಲ್ದು। ಕಂತುಮರ್ದನ ಮೆಚ್ಚಿದೆಂ ಬೇಡು ಬೇಡೆನಲು। ಸಂತೋಷಸಾಗರದೊಳದ್ದೆನ್ನ ವಕ್ಷದೊಳು ನಾಟ್ಯಮಂ ನಟಿಸಿ ಬಳಿಕ॥ ಮುಂತೆ ಚಿತ್ರಮಾದ ಗಣಪದವಿಯಂ ಪಾಲಿಸೆನ। ಲಂತೆಗೈದಪೆನೆಂದು ತಾಂಡವದ ಚಿಹ್ನಮಂ। ತಾಂ ತಳೆಯಲುದ್ಯೋಗಿಸಿದನದೇಂ ಭಕ್ತರಾಧೀನನೋ ಸರ್ವೇಶನು॥೪೬॥ ಕುಂಜರವ್ಯಾಘ್ರಚರ್ಮಂಗಳಂ ದೇಸಿಯಂ। ಮುಂಜೆರಗು ಮಿಗಲುಟ್ಟು ಪೊಳೆವ ಮುರಿವಾವಿನಿಂ। ಕಂಜಿಪ ಗಳಿಂ ಬಿಗಿದು ವರವಿಭೂತಿಯನೆಸವ ಸರ್ವಾಂಗದೊಳ್ ಧೂಳಿಸಿ॥ ರಂಜಿಸುವ ಶರಪಿನಾಕಮನುಳಿದು ಶೂಲದಿಂ। ದಂಡವದೊಳಸುರನಂ ನೆಲಕಿಳುಪಿ ಶಂಭು ಪ್ರ। ಷ್ಪಾಂಜುಳಿಯುಗಮಕದಿಂದವನ ವಕ್ಷೋರಂಗಮಂ ಪೊಗಲ್ಕನುಗೈದನು॥೪॥ ನಂದಿ ಮುಷ್ಟಳೆಯ ನಬ್ಜಾಸನಂ ತಾಳಮಂ। ಕಂದರ್ಪ ಪಿತನೆಸವ ವಾಸಮಂ ಹರುಷದಿಂ। ದಿಂದಿರಸು ಪಾಂಗಮಂ ನಾರದಂ ವೀಣೆಯಂ ತುಂಬುರರು ದಂಡಿಗೆಯನು। ಇಂದುಮೌಳಿಯ ಸುತ್ತಲುಂಪಿಡಿದು ತತ್ಕ್ರಿಯಗ। ಳಿಂದ ಬಾಜಿಸಿದರಂಬುಜಭವಾಂಡಂ ನೋಡ್ಡಿ। ಲಂದು ಶಬ್ದಬ್ರಹ್ಮದಿಂ ಪೂರ್ಣಮಾದುದೆಂಬಂದವಾಯೆತ್ತ ವೇಳ್ವೆ

ಸು॥೪೮॥ ವೀರಭದ್ರಾದಿಗಣವಿತತಿ ತದ್ಬಾಣಸಂ । ಹಾರಶೇಷಾಸುರನಿ
ಕಾಯಂ ಸಮಸ್ತಬೃಂ। ದಾರಕವೃಜಮಖಿಳಭುವನಜನಮುಳ್ಕರಿಂಶಿ
ರನಾಟ್ಯಮಂ ನೋಡಲು॥ ಸಾರಸಂತೋಷದಿಂ ನೆರೆದುದು ಜಯಸ್ವ
ನಂ, ಭೋರಿಡಲು ಶರಧಿನಿರ್ಘೋಷದಿಂದುರಿತಸಂ। ಹಾರನಂಧಾಸುರನ
ರಕ್ತದೊಳು ಪುಷ್ಪಾಂಜಲಿಯನೆಸಗಿದಂ ಮುದದೊಳು॥೪೯॥ ಇರದೆಪು
ಷ್ಪಾಂಜಲಿಯ ಸಮನಂತರದೊಳೆವಿ। ಸ್ತರದಿಂದೆ ಧುತವಿಧುವಾಧೂ
ತಮೆಂದೆನಿಪ। ಶಿರದಭೇದಂಗಳಿಂದಂ ಪತಾಕಾದಿಹಸ್ತಂಗಳ ವಿಡಾಯ
ದಿಂದಂ॥ ಪರಿಕಿಸೆ ಸಮಾಭುಗ್ನಮಾಭುಗ್ನಮುಖ್ಯಮಾ, ದುರದಭೇದಂ
ಗಳಿಂದಂ ವಿವರ್ತಿತಮುಖ್ಯ। ಪರಿಯ ಭೇದಂಗಳಿಂದಾಡಿದಂ ಶಂಕರಂ ಪೇ
ಳಲೇನಚ್ಚರಿಯನು॥೫೦॥ ನಟಣೆಯಿಂ ಕಂಪಿತೋದ್ಧಾಹಿತಸುಚಿಹ್ನಾ
ದಿ। ಕಟಿಯ ಭೇದಂಗಳೈದಂ ಸವಿಸ್ತರವಾಗಿ। ನಿಟಿಲಾಂಬಕಂ ತೋರಿಸ
ಮಮಂಚಿತಾದಿ ಪದಭೇದಂಗಳಂ ಕಾಣಿಸಿ॥ ಪಟುತರ ಪ್ರತ್ಯಂಗಭಾವ
ಮಂ ಕೈಗೈದು। ಚಟುಲವಾಗಿರ್ದ ಕೊರಳೋಜೆಗಳನನುಗೊಳಿಸಿ। ನ
ಟಿಸಿದಂ ಶಂಭು ನೋಟಕರದಿಟ್ಟಿಗಳೊಡನೆ ನಟಸ್ವಿಲಾಸದಿಂದಂ॥೫೧
ಇರದೂರ್ಧ್ವಮುಂ ತಾದಭುಜದಭೇದಂಗಳಂ। ಪರಿವಿಡಿಯೊಳೆರಪಿಬು
ಲ್ಲಕ್ಷಾಮುಮೆಂಬುದರ । ಧುರಭೇದಮಂ ತೋರಿ ವಲಿತಕಂಪಿತಮು
ಖ್ಯಮಾದೂರುಭೇದಂಗಳ॥ ಹರುಷದಿಂ ವಿಸ್ತರಂಗೈದುಮಾವರ್ತಿತಂ।
ಪರಿಕಿಸಲ್ಕುನ್ನತೋತ್ಕ್ಷಿಪ್ತಾದಿ ಜಂಘೆಗಳ। ಪರಮಭೇದಂಗಳಂ ತೋರಿ
ದಂ ಭುವನಜನಕೀಶಂ ಚಮತ್ಕೃತಿಯೊಳು॥೫೨॥ ಪರಮಶೃಂಗಾರಾ
ದಿರಸದೆಸಕದಿಂದವಿಸ್ತರದ ಸಾತ್ವಿಕವರಸ್ಥಾಯಿಸಂಚಾರಿಗಳ। ಪರಿ
ವಿಡಿಗಳಿಂದಲಾಂಗಿಕವಾಚಿಕಾಹಾರ್ಯಸಾತ್ವಿಕಾದ್ಯಭಿನಯಂಗಳಂ॥ ಗ
ರುವಿಕೆಯ ಗಮಕದಿಂ ಪಾದಚಾರಿಗಳ ಲಘು । ಚರಣವಿನ್ಯಾಸದಿಂದೆಸ
ವಕೋಪಕಳಾಸ। ತಿರುಪುಗಳ ಬೆಡಗು ಬಿಂನಣದ ನಗಜಾಧವಂ ತೋ
ರಿದಂ ತಾಂಡವವನು ॥೫೩॥ ಇವು ಮುಖ್ಯವಾದವರ ಭರತಶಾಸ್ತ್ರಕ್ರ
ಮದ। ವಿವರಣೆಯನೆಲ್ಲಮಂ ವಿಸ್ತರಿಸಿಯಂಬುರುಹ। ಭವನ ತಾಳಕನಂ
ದಿ ಬಾಜಿಸುವ ಮದ್ದಳೆಯ ಗತಿಗವಾಸವಿಲಾಸಕೆ ॥ ದಿವಿಜವಲ್ಲಭನು
ಪಾಂಗಶ್ರುತಿಗನಾರದೋ। ದ್ಭವ ಸುವೀಣಾಕಿಂಕಿಣಸ್ವನದ ಸಮ್ಮಿ
ತಕ। ಭವನಾಡಿದಂ ಸಕಲಭುವನಜನದುತ್ಸವಂತವೆಪೆಚ್ಚೆ ಸಂತಸದೊ
ಳು॥೫೪॥ ತಳೆಯ ನದಿಯಲ್ಲಾಡೆ ಕಿರುಜೆಡಗಳೊಲದಾಡ, ಲಲಿತಮು
ಖರಸವೇರೆಬೆಮರಂಗದೊಳು ತೋರೆ । ಪುಳಿದೊವಲು ನೆಲಕಲಯೆ
ರುಂಡಮಾಲೆಗಳೊಲೆಯೆ ಭರವಾಗಿ ನಾಸಿಕದೊಳು॥ ಎಲರೊಡನೊ

ಚನೆಸುಳಿಯೆ ತೆಳ್ವಸುಬರ್ಗಳದಿಳಿಯೆ । ಸಲೆನಾದ್ಯತತಿ ನೊಳೆಗೆ ಫಣಿ
ಭೂಷಣಂ ತೊಳಗೆ। ನಳಿತೋಳ್ಗಳಂ ನೀಡಿ ಪಲವಂಗದಿಂದಾಡಿ ಮೆರದ
ನುರೆ ಬಿನ್ನಣವನು ॥೫೫॥ ದೇವತೆಗಳೆಲರ ಮಳೆಯಂ ಕರೆಯೆ ಜಯ ಜ
ಯಾ । ರಾವದಿಂದಖಿಳಲೋಕದ ಜನಂ ಕೈಮುಗಿಯೆ । ದೇವಸಂಘಾ
ಸುರನವಕ್ಷದಿಂ ದಿಳಿದವಂಗಿತ್ತು ವರಗಣಪದವಿಯಂ ॥ ಶೀವಿದಚಸಂಗೆ
ಳಂ ಕರುಣದಿಂ ಬೀಳ್ಕೊಟ್ಟು। ದೇವಿಯುರ್ವರಸಿ ಕೈಲಾಸಗಿರಿಶಿಖರದವ।
ಹಾವಿಭವದರವನೆಗಪೋಗಿ ಘನಹರುಷದಿಂದಿರ್ದಂ ವಿರೂಪಾಕ್ಷನು॥
ಇಂತೆಸವ ಚೆನ್ನಬಸವೇಶ್ವರಪುರಾಣವಂ। ಸಂತಸದಿ ಬರದವರ್ಗೋದಿ
ದರ್ಗರ್ಥವಾ। ದ್ಯಂತವಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇ
ಳ್ದವರ್ಗೆ॥ ಸಂತತಂ ಸಕಲಸುಖಮಂ ಸಕಲಭೋಗಮನ। ನಂತಸೌಭಾ
ಗ್ಯಮಂ ಕೊಟ್ಟು ರಕ್ಷಿಸುವನಾ। ಕಂತುಹರನಪರಾವತಾರನೆನಿಸುವ
ಚೆನ್ನಬಸವೇಶನಳ್ಕರಿಂದಂ ... ... ... ॥೫೬॥

ನಾಲ್ಕನೆಯ ಕಾಂಡದಲ್ಲಿ ೧೦ನೇ ಸಂಧಿ ಮುಗಿದುದು
ಅಂತು ಸಂಧಿ ೫೦ಕ್ಕಂ ಪದ ೨೧೧೫ಕ್ಕಂ ಮಂಗಳ.

## ೧೧ನೇಸಂಧಿ

ಸೂಚನೆ॥ ಮೂಲೋಕವರಿಯಲೀಶ್ವರನೊಲಿದು ಸೇತಭೂ।
ಪಾಲಕನ ಮೊರೆಗೇಳ್ದು ಭಾಳಾಕ್ಷಿಯುಗ್ನಿಯಿಂ। ಕಾಲನಂ ಸು
ಟ್ಟು ಮಗುಳಸುವಿತ್ತು ಸೇತನಂ ಕೈಲಾಸಪುರಕೊಯ್ದನು॥

ಪದ॥ ಹೆಂಡತಿಯು ಮಗನನರಿದನ ಮಗನ ಮಾವನಂ। ಮಂಡೆಯೊ
ಳುಧರಿಸಿ ಕರಜಾತಪ್ರಘಾತದಿಂ। ಪುಂಡರೀಕೈಕಕರಧೃತನಾಗಿ ತಜ್ಜಾ
ತಸವನಪ್ರವಿಘ್ನನಾಗಿ॥ ಹೆಂಡತಿಯು ಲೀಲಾಕುಮಾರನಂ ಶಿರವನುರೆ।
ಖಂಡಿಸಿದಪಂಪಾವಿರೂಪಾಕ್ಷನೀ ನೆಮ್ಮಂ । ಕೊಂಡು ರಕ್ಷಿಪುದು ಭೂ
ಮಂಡಲದ ಸುಜನರಂ ಚಂಡಕರಕೋಟಿತೇಜ ॥೧॥ ಎಲೆಸದ್ಧರಾಮ
ಕೇಳ್ಪೂರ್ವದೊಳ್ಶ್ವೇತನೆಂ । ಬಿಳೆಯಾಣ್ಮನುಂಟಾನೃಪಂ ಬಹಳ
ಭಾಗ್ಯದಿಂ। ಬಲದಿಂ ಮಹಾದೇಶದುರ್ಗತಳತಂತ್ರಾದಿ ಸಕಲಸನ್ನಾಹ
ದಿಂದಂ॥ ಇಳೆಯು ನಾಳುತ್ತೊಂದು ದಿವಸ ಮಾಭೂವರಂ। ತಳರಿದಂ ನೊ
ಲವಿಂದ ಚತುರಂಗಬಲವೆರಸ। ನಲವಿನಿಂ ವೈಹಾಳಿಗುದಧಿರವಮಂ ಮೀ
ರಲಳ್ಳಿಂದ ವಾದ್ಯಂಗಳು ॥೨॥ ಆ ಪುರದೊಳೋರ್ವ ಪರದಂ ಸಮುದ್ರಾಂ
ತರ। ದ್ವೀಪಂಗಳೊಳು ತನ್ನ ಬೆವಹಾರಕೈದಲವ। ನೋಪಳು ನೃಪಾ
ಲಕಂ ವೈಹಾಳಿಗೈದುವುದನೀಕ್ಷಿಸುವ ತವಕದಿಂದಂ॥ ವ್ಯಾಪಿಸಿದ ಕನ
ಕಮಣಿಗಣ ತೋರಣಾವಳಿಯ। ಗೋಪುರವನಡರಿ ನೋಡುತ್ತಿರಲು

ಶಶಿಮುಖಿಯು । ರೂಪುಯೌವನವಿಲಾಸಂಗಳಂಶ್ವೇತನೆಂಬವನೀಶ
ನೀಕ್ಷಿಸಿದನು॥೩॥ ಕಾರಿದುದುಕರಣತತಿಲಜ್ಜೆಯುಂನಿಮಿರಿಕಾ।ಲೂ
ರಿದುದುಹೃದಯದೊಳುತಿಮಿರಂಗಭೀರಾಬ್ಧಿ। ಯಾರಿದುದುಮನ್ಮ
ಥಂಪೂಗಣೆಗಳಂ ಪ್ರಾಡಿದಂತನ್ನಕಬ್ಬುವಿಲ್ಲ॥ ಪಾರಿದುದುಧೃತಿಪಲ್ಲ
ಟಂಬೋಗಿತನುಬಲಂ ಜಾರಿದುದುಚಿಂತಾಲತಾವೃದ್ಧಿಪರ್ಬಿಕುಡಿ।
ದೋರಿದುದುಭೂಪಂಗೆಪರಸತಿಯುಬೇಟವೆಂಬಪಥ್ಯವೋಮಾನವ
ಗೆ॥೪॥ ಅಂತರಂಗದೊಳಿನಿತುಹದನಾಯ್ತುಭೂಪತಿಗೆ।ಮುಂತಿರ್ಪ
ಸಚಿವಸಾವಂತಸೇನಾಧಿಪ। ಗಂತೋರಿಯಾಕಘಾರಣವನೊತ್ತೆಗೊ
ಟ್ಟುನೃಹಾಳಿಯುಬಯಲ್ಗೆ ಪೋಗಿ॥ ತಿಂತಿಣಿಯತುರಗದೇರಾಟಮುಂಕೈ
ಗೊಡುವ। ದಂತಿಗಳಯುಗ್ಧದಸಘಾಟಮಂನೋಡದೆನೃ। ಪಂತಿರು
ಗಿದಂಚಿತ್ರಪಟದರೂಪಿನತೆರದಿನಂದಣದಗೊಂದಣದೊಳು॥೫॥ ಅರ
ಮನೆಯಮುಂದಂದಳವನಿಳಿದುಭೂಪರಂ। ಬೆರಳಸನ್ನೆಯೊಳಾಲ
ಯಂಗಳಿಗೆಬೀಳ್ಕೊಟ್ಟು। ತರತರದೊಳುರತಿಯನೆತ್ತುವಂಗನೆಯ
ರಂಕಣ್ಣೋರೆಯಿಂಜರವೃತ॥ ಸರಸಪರಿಮಳಪೂರವಮಾಧಶಯ್ಯಾಗೃ
ಹ। ಕ್ಕರಸನೈತಂದುಪವಡಿಸಿದಿವಮನೊಂದುಸಾ। ಸಿರವಾಗಿಕಳೆ
ಯೆಮಾರ್ತಂಡನೈದಿದನಸ್ತಗಿರಿಯಮರೆಯಂಕ್ಷಣದೊಳು॥೬॥ ಅ
ಳ್ದುದಾಕುಮುದಂಮುದಂಚಕೋರಕ್ಕಾಯ್ತು।ಪೊಳ್ದುದಳಲಿಂ
ಚಕ್ರವಾಕವಾಕಮಲದೋ। ಳ್ಕೆಳ್ದುದುರೆತುಂಬಿತುಂಬಿದುದುತಿ
ಮಿರಂಶ್ವೇತನೃಪನಸ್ಸತ್ತ್ವಮಿರದೊಡನೆ॥ ಮುಳ್ದುದಾಗಿಡಕೆವಿಹಗಾ
ಳಿಗಾಳಿಯುಕೂಡೆ।ತೆಳ್ದುದೆಲ್ಲಾಕುಸುಮಪರಿಮಳಂಮಲತಗೆ।
ಕೆಳ್ದುನಿಶಿಯುಂಚಿತ್ತವಂದಂಗಜಂಗಜರಿಸರಳಂಪ್ರಯೋಗಿಸಿದನು॥
ಎಲೆಸಿದ್ಧರಾಮಕೇಳಾಸಮಯದೊಳುನೃಪಂ। ಕಳವಳಿಸಿವಿರಹದಿಂ
ತನ್ನಾಪ್ತಸಖಿಯನೋ। ವರ್ಳನಿರದೆಕರೆದುಕೇಳೆಲೆತರುಣಿರತ್ನವ
ರ್ಮನಕಾಂತೆಯಂಪಗಲೊಳು॥ ಲಲಿತಸೌಧಾಗ್ರದೊಳುಕಂಡೆನವ
ಳಂತಂದು। ಕಳುಪದಿರಲನ್ನಹರಣಂಪೋಪುದೆನಮುನ್ನ।ಕಳುಪಿದ
ವರೊಳಗಿದೇಂಘನವೆತಂದಪೆನೆಂದುಬೀಳ್ಕೊಂಡುನಡೆತಂದಳು॥೮॥
ಬಂದುಪರದನಮನೆಯನೊಳಪೊಕ್ಕುಪಲವುತೆರ। ದಿಂದಾತನಂಗನೆ
ಯನೊಡಬಡಿಸಿಗುಪ್ತದಿಂ। ತಂದವನಿಪತಿಯಪೊರೆಯೊಳಗಿರಿಸಲಾ
ತನಿವಳಂನೋಡಿವಿನಯದಿಂದಂ। ಇಂದುಮುಖಿಕೊಳ್ಳೆನುತೆಸಕಲಪ
ರಿಮಳಕುಸುಮ। ವೃಂದಮಂಕೊಡುವನಿತರೊಳಗಚಂಪಕಪುಷ್ಪ।
ವೊಂದುಪಡಿಗದೊಳಬೀಳ್ವನಿತರೊಳುಶಂಕರಾರ್ಪಿತವೆಂದನವನೀ

ಶನು||೯|| ಈತನೀತೆರದೆದುಷ್ಟವ್ಯಸನಪಾಪದು| ರ್ನೀತಿಯುತನಾ
ಗಿರಲ್ಕಂತ್ಯಕಾಲಕ್ಕೆಯಮ| ದೂತರಿವನಂಕೊಂಡುಪೋಗಿಯಮರಾ
ಜನಿದಿರೊಳುನಿಲಿಸೆಕಂಡಾತನು|| ಪಾತಕವೃಷಂಗಳೆಂತೆನೆಚಿತ್ರಗು
ಪ್ತರುವಿ| ಜಾತಕಿಲ್ಬಿಷನಿವಂರೌರವಪ್ರಾಪ್ತಿಮಿಗೆ | ಭೂತನಾಥಂಗೆ
ಬೀಳ್ದಲರನರ್ಪಿಸಿದಸದ್ಧರ್ಮವಿರ್ದಪುದೆಂದರು ||೧೦|| ಆಗವಮಾಡಿದ
ಧರ್ಮದಿಂರಂಭೆಯೊಡನೆಸಂ | ಭೋಗವಿಮಾತಂಗೊಂದುರಾತ್ರಿಯೆಂ
ದಾತನಂ| ಬೇಗದಿಂತಂದುರಂಭೆಗೆರಹಸ್ಯದೊಳಿವನವರ್ತನಂಗಳನು
ಸುದರ್|| ರಾಗದಿಂದಿವನೊಳೀರಾತ್ರಿಯೊಳಗಿರ್ದೀವು| ದೀಗುಣವಿಹೀ
ನನಂನಾಳೆನಮಗೆಂದವ| ರೊಪ್ಪೀಗಲೇಗುವೆನೆನ್ನಸಂಗದೊಳಗಿರ್ದಂ
ಗೆನರಕವೇಹಾಯೆಂದಳು ||೧೧|| ಚಿಂತಿಸಿದೊಡೇನಘವಪೂಜೆಯಿಂ
ದೀನೃಪತಿ| ಗಂತಕನಬಾಧೆಯುಂಪಿಂಗಿಸುವೆನಾನೆನು| ತ್ತಂತರಂಗದೆ
ತಿಳಿದುಸೇತನಿರ್ದಮಲಪರ್ಯಂಕವುಂಸಾರ್ದನಿಲಲು || ಮುಂ
ತವಳನೀಕ್ಷಿಸಿರತಾರಂಭಚೇಷ್ಟೆಯಿಂ | ಕಾಂತೆಯಂಬರಸೆಳವುತಿತ್ತ
ಬಾರೆನಲವಳು | ದಂತರುಚಿಭಿತ್ತಿಯನಲಂಕರಿಸೆನಸುನಗಲುಭೂ
ಮಿಪತಿಯಿಂತೆಂದನು ||೧೨|| ರೂಪುಗುಣಸತ್ಕಲಾಪ್ರೌಢಿಯಿಲ್ಲೆನ
ಗೆತ | ಕ್ಕೋಪನಿವನಲ್ಲೆಂದುನಗುವೆಯೋನೀನೆನಲು| ಭೂಪಕೇಳ್
ರತಿಗೆಲಟಕಟಪೆ ನಾಳಿನಯಮನಬಾಧೆಯಂನೋಡೆಯೆಂದು || ಈ
ಪರಿಯೊಳಾಂನಕ್ಕೆನಲಿಂದಿದೇಕೆನಿಂ| ನೀಪರಮಸಂಗಮಿದುನಾಳೆ
ಭಯಮೇಕೆಸಲು | ಪಾಪಿಕೇಳಾನಿನ್ನವಿಧಿಯನುಸುರುವೆನೆನುತ್ತ
ಬುಜಾಕ್ಷಿಯಿಂತೆಂದಳು ||೧೩|| ಮುನ್ನನೀಂಮಾಡಿದಮಹಾಪಾಪ
ಮಂಪೇಳ| ಲೆನ್ನಹವಣಲ್ಲಪ್ರಯತ್ನದಿಂದೊಂದುಕುಸು | ಮಂನೆಲ
ಕೆಬೀಳಲೀಶಾರ್ಪಣಮೆನಲ್ಬಂದುದೆನ್ನಸಂಭೋಗಮಿಂದು|| ಇನ್ನಾ
ಲಿಸೈಭಸ್ಮರುದ್ರಾಕ್ಷಿಶಿವಮಂತ್ರಸನ್ನುತಿಯೊಳಭವನಂಭಜಿಸಿನಾಳಿ
ನನರಕ| ಮಂನಿವಾರಿಪುದೆನಲ್ಕಿನಿತುಬೇಗದೊಳಪ್ಪುದೇಯೆನಲ್ಕಿಂ
ತೆಂದಳು||೧೪|| ಅತಿಪಾಪಿಯೋರ್ವನೆಪಾಳ್ಗಡಿಯೊಳಡಗೆಡದು| ವ್ಯ
ತೆಸಮಯದಿಂದಿರಲುಕಂಡೊಂದುಶುನಕನ| ಪ್ರತಿಹರುಷದಿಂತಿಂಬೆ
ನೆಂದುಕಾಡಿದರ್ಜೀವಂಬೋಗದಿರೆಕಾಣುತ|| ದ್ರುತದೊಳಾತನಘ
ಣೆಯುಮೆಟ್ಟಪೊಗಲ್ಕವಂ| ಹತವಾಗೆಯಮದೂತರೆಳೆಯೆಶಿವಚರರೈ
ದಿ| ಸಿತಭಸಿತಮಿವನಪಣೆಯೊಳಗಿಪ್ಪುದೆನುತೆಕೈಲಾಸಕ್ಕೆಕೊಂಡೊ
ಯ್ದರು||೧೫|| ವನದೊಳಗೆರುದ್ರಾಕ್ಷಿವಣ್ಗಳಂಕಂಡೋರ್ವ| ವನಚರಂ
ಮೇಲ್ದದರಬೀಜಮಂಸರಿಗಟ್ಟಿ| ಶುನಕನಕೊರಳ್ಗೆಬಂಧಿಸಿಪಂದಿಹೊ

ಋದ್ಧಿಸಾಯಸ್ನಿಯೆ ಯಮದೂತರೈದಿ॥ ಶುನಕನಂ ಪಿಡಿಯೆ ಶಿವದೂತರೈತಂದಂತೆ। ಕನದೂತರಂ ಬಡಿದು ಶಿವಲೋಕಕೊಯ್ಯರೇ। ಘನವೆಲಾ ಶಿವಲಾಂಛನಂ ಭೂಪ ಕೇಳೆಂದು ತರಳಾಕ್ಷಿ ಯಿಂತೆಂದಳು ॥೧೬॥ ಅರಸ ಕೇಳತಿಪಾಪಿಯೊರ್ವ ಶೂದ್ರಂ ತನ್ನ। ಮರಣಕಾಲದೊಳೆ ಮಗನಂ ಕರೆದು ಹೊಲನನೀಂ। ಹಗಣಾಯೆನುತಸುವನಳಿಯಲವನಂ ಶಿವನ ಪೊರೆಗೊಯ್ದರಿನ್ನಾಲಿಸು॥ ತರಣಿಜನ ಪುರಕೈದಿಸಾನಂದಮುನಿವರಂ। ಪರಮ ಪಂಚಾಕ್ಷರಿಯ ಮಂತ್ರಮಂ ಸ್ಮರಿಸಲಾ। ನರಕಿಗಳ್ಕೇಳ್ದು ತನ್ಮಂತ್ರದುಚ್ಚರಣೆಯಿಂ ಕೈಲಾಸಪುರಕೈದರೆ॥೧೭॥ ಮುಂನೊರ್ವ ಪಾರ್ವನತಿಪಾತಕಂ ಚಂಡಾಲ। ಕನ್ನೆಯೊಳು ನೆರೆಯಲವರೀರ್ವರಂ ಪೊರಡಿಸ। ಲ್ತನ್ನವಳ್ವೆರಸಿಕಾಂತಾರದೊಳಗಿರಲವಳು ಸಾಯಲವಳಾತ್ಮಜೆಯರ॥ ಗನ್ನದಿಂ ಕೂಡಿರುತ ಶೈವಾಲಯದೊಳೆದೀ। ಪಂ ನಂದುತಿರೆ ಕಳವು ಸಂಧಿಸದೆನುತೆ ಬತ್ತಿ। ಯಂ ನೂಕೆ ಮರಣಕಾಲದೊಳೆ ಭವದೂತರವನಂ ಶಿವನ ಪೊರೆಗೊಯ್ದರು ॥೧೮॥ ಪನ್ನೆರಳ್ವರುಷದಾಯುಷ್ಯದ ಕುಮಾರನಂ। ಪನ್ನಗಾಭರಣನಿಂ ಪಡೆದಾ ಮೃಕಂಡುಮುನಿ। ತಂನಂದನಂ ದಿನಂ ಸಾರೆ ಬರೆ ಕಂಡು ಶಿವಪೂಜೆಯಂ ಮಾಡುತಿರಲು॥ ಉನ್ನತದ ಪಾಶದಿಂದಂತಕಂ ಕೋದೆಳೆಯೆ। ತನ್ನಿದಿರ್ಲಿಂಗಮಂ ತಬ್ಬಿ ಶಿವದೋಯೆನಲು। ಮನ್ನಿಸುತೆ ಮುನಿಪನಂ ಮೃತ್ಯುಂಜಯಂ ಶೂಲದಿಂದಂತಕನನಿರಿಯನೆ॥೧೯॥ ಅರಸ ಕೇಳಿಂತು ದೈವಾಧೀನದಿಂ ಪೂರ್ವ। ಪುರುಷರೀಶನ ಪದಂಗಂಡರಿಂದೀಗ ನೀ। ನಿರದೆ ಶಿವಪೂಜೆಯಂ ಮಾಡು ಮಾಡಿದೊಡಂತಕನ ಭಯಂ ಪೋಪುದೆನುತೆ॥ ವರವಸ್ತ್ರ ಭಸಿತ ರುದ್ರಾಕ್ಷೆ ನಾನಾ ಕುಸುಮ। ಪರಿಮಳ ಸುಗಂಧನವ ಧೂಪದೀಪಂಗಳಂ। ತರಿಸಿ ತರತರದೊಳಿಂಬಿಡಿಸಿದಳು ರಂಭೆ ಶಂಭುವಿನಿಬರೊಳಾಕ್ಷಣದೊಳು ॥೨೦॥ ಈಕ್ಷಿಸಿದನೀ ಸಕಲಪರಿಕರಂಗಳನರಸ। ನಾಕ್ಷಣದೊಳೆಲೆ ರಂಭೆ ಶಿವಪೂಜೆಯಂ ಮಾಡೆ। ದೀಕ್ಷೆಯನಗಿಲ್ಲ ಪಾಪಾತ್ಮ ಸಂಪತಿಕರಿಸಿ ಕರುಣದಿಂ ಧರ್ಮಪಥಕೆ॥ ಶಿಕ್ಷಿಸಿದೆನೀನೆ ಗುರುವಲ್ಲದೆನಗಿನ್ನಾರು। ಪೇಕ್ಷಿಸದನುಜ್ಞೆಯಂ ಕೊಡುವುದೆನೆ ಕೇಳ್ದಂಬು। ಜಾಕ್ಷೆಯಾ ಶ್ವೇತಂಗೆ ದೀಕ್ಷೆಯಂ ಕೊಟ್ಟು ಶಿವಪೂಜೆಯಂ ತೊಡಗಿಸಿದಳು ॥೨೧॥ ಪರಿಪರಿಯ ಕರ್ಪುರಸೊಡರ್ಗಳಿಂ ಧೂಪದಿಂ। ಗುರುತರದ ನೀರಾಜನಂಗಳಿಂ ಬಹುಭಕ್ಷ್ಯ। ಪರಡಿಪಾಯಸ ಮೋದಕಾದ್ಯದಧಿ ದುಗ್ಧಶಾಲ್ಯಾನ್ನ ಸೂಪಂಗಳಿಂದಂ॥ ಪರಮ ಕರ್ಪೂರ ತಾಂಬೂಲದಿಂ ಭೂವಿಷಂ। ಗಿರಿಜಾಧವನನರ್ಚಿಪನಿತರೊಳಗಿಂದ್ರದಿ। ಗ್ವರವಧೂಸೀಮಂತ

ಮಣಿಯೊಲುದಯಾದ್ರಿಯೊಳು ತರಣಿಮಂಡಲಮೆಸೆದುದು ॥೧೧॥
ಓಡಿದುದು ತಿಮಿರಮಿಂದೀವರದನಗೆಮೊಗಂ । ಬಾಡಿದುದು ಮಿಗೆಚ
ಕೋರಂಗಳ ಮನಂಬಿಡದೆ। ಕೋಡಿದುದು ಕಮಲಕುಲ ಮರಳಿದುದು
ನಂದಿದುದು ಶೋಕಮಣಿಪಕ್ಕಿಗಳ॥ ತೀಡಿದುದು ತಂಗಾಳಿ ತರಣಿಯ
ಬಿಸಿಲ್ದಾಳಿ। ಮಾಡಿದುದು ದೆಸೆಗಳೊಳು ತುಂಬಿಗಳಲರ್ಗಳೊಳು। ಪಾ
ಡಿದುದು ಸಿದ್ಧರಾಮೇಶಕೇಳಾಸಮಯದೊಳಗೊಂದು ಕೌತುಕವೆ
ನು॥೧೨॥ ಮುನ್ನ ರಂಭೆಗೆ ಭೂಪನಂ ಕೊಟ್ಟು ಪೋದಯಮ । ನುನ್ನ
ತಾಳ್ಗೆಳ್ಬಂದು ರಂಭೆ ಭೋಗಿಸಲೆಂದು । ನಿನ್ನಿರುಳು ನಿನಗಿತ್ತವನನೀ
ವುದೆನಲಾಕೆ ಯಾತನಂ ತೋರಿಬಿಡಲು॥ ಪಂನಗಾಭರಣನಪರಾವತಾ
ರದೊಳಿರ್ದ್ದ। ದಂ ನೋಡಿ ನೋಡಿ ವಿಸ್ಮಿತರಾಗಿ ಮುಟ್ಟಲುಭ. ಯಂನಾ
ಟಚಿತ್ತದೊಳು ದೂತರ್ಯ್ಯತಂ ನಾಕೃತಾಂತನೊಡನಿಂತೆಂದರು ॥೧೩॥
ಜೀಯ್ಯ್ವಚಿತ್ತ್ರ್ಯಸು ನಿನ್ನಾಜ್ಞೆಯಿಂದಾಶ್ವೇತ। ರಾಯನಂ ಸುರಸತಿಗೆ
ಕೊಟ್ಟು ಬಂದೆವು ನಿನ್ನೆ । ಮಾಯಯೇನಂದರಿಯೆವಿಂದಾತನಂತರ
ಲ್ಪೋಗಿ ನೋಡಲಾತ್ಕತನ॥ ಕಾಯದವಿಭೂತಿರುದ್ರಾಕ್ಷೆಗಳ ಪೂಗಳ
ನಿಕಾಯದಿಂ ಮಾಳ್ಪಭವಪೂಜೆಗಳ ಹದನರಿದು । ಕಾಯಲಂಮದೆ
ಬಂದೆವೆಂದು ಬಿನ್ನವಿಸೆ ಕಿಡಿಕಿಡಿಯಾದನಾಕೃತಾಂತಂ॥೧೪॥ ಆಗಲ
ದಕೇನಾಯ್ತು ರಂಭೆಯ ವಿಡಾಯಮಂ। ನೀಗಿಯವನೊಡನವಳನೇ
ಕೊಂಡು ಬಹೆನೆಂದು । ಬೇಗದಿಂ ತನ್ನ ಕರಕಲಿತಭೀಷಣಗದಾದಂಡ
ಮಂ ತವೆತಿರುವುತ ॥ ಆಗಳ್ ಯಮಂ ದೂತರಂ ಕೂಡಿಕೊಂಡು ಗತ।
ಯಾಗಪುರಕೈತಂದು ರಂಭೆಯಂ ಕರದೆಲೆಗೆ॥ ಚಾಗು ಚಾಗೆನ್ನವನನೇ
ಕಕೊಡೆನೀನೆಂದು ಮೊರೆಯುಲವಳಿಂತೆಂದಳು॥೧೫॥ ಕೊಂಡು ಪೋ
ಗೆಲೆಕಾಲ ನಿನ್ನಾತನದೆ ಕೊನೀ। ನಂಡಲೆಬಿಡೆನಗೆ ಕಾರಣವಾವುದೆನೆ
ಯಮಂ। ಬಂಡತನವೇಶ್ವೇತನಡೆ ನರಕಕುಂಡಕ್ಕೆ ನೀನೆಂದು ಗರ್ಜಿಸ
ಲ್ಕೆ॥ ಖಂಡಪರಶುವಿನ ಪೂಜಾವಿಧಿಯನುಳಿದ್ದೈದೆ। ಕಂಡವರು ನಗರೆನೀ
ನಜ್ಞನೇ ಕಾಲಮಾ । ರ್ಕಂಡೇಯನಂ ಪಿಡಿಯೆ ಬಂದ ಸಂಕಟವನೇಂ
ಮರೆದೆಯಾ ನೀನೆಂದನು॥೧೬॥ ಎನೆ ರಂಭೆಯಂದಳೆಲೆ ಶಮನೆ ಶಿವಪೂ
ಜಕರ। ಘನವನರಿಯಾ ರುದ್ರಮುದ್ರಾಸ್ಪದರ ಸೆಂತು। ಕನಲುವೈ ಕನ
ಲಿದೊಡಸ್ವೈರಿಪನೆ ಶಂಭುಭಕ್ತರ ಭಕ್ತನಾತನಲ್ತೆ॥ ನಿನಗೇತಕಜ್ಞಾನಭ
ಕ್ತರಾಡಿದುದೆ ದೇ। ವನವಾಕ್ಯವವರೆಸಗಿದುದೆ ಶಿವನ ಸತಂತ್ರವೀ । ತನ
ಸುಳಿದು ಪೋಪುದೇ ಕಾಯರ್ಮನೆಕಂಗಳೊಳು ಕಿಡಿಗೆದರು ತಿಂತೆಂ
ದನು॥೧೭॥ ಪಾಶದಿಂದೆಳೆದು ಮತ್ಪುರಕೊಯ್ವೆನಿವನಂ ಸ। ದಾಶಿವ

ನೆಬಿಡಿಸಿಕೊಳಲೆಂದು ಘುಡುಘುಡಿಸಿಕೀ । ನಾಶಂನೃಪಾಲಕನಕೊಳ್ಗಿರ್ಪಾಶವನಿಕ್ಕೆ ಘರ್ಜಿಸುತೆ ಬರಸೆಳೆಯಲು॥ ಈಶಶಂಕರ ಸರ್ವಗತ ಮಹಾದೇವ ಭವ। ನಾಶ ಭಕ್ತಪ್ರಿಯ ಶಶಾಂಕಶೇಖರನೆ ಶಿವ। ಧೋಶರಣು ಸಲಹಲಾಗದೆ ಸರ್ವದೋಷಕನನೆಂದು ಸೇತಂಬೀರ್ದನು॥೨೯॥ ರಕ್ಷಿಸೈ ಪಿಂತೆ ಮಾರ್ಕಂಡೇಯನಂ ಸಲಹಿ, ಶಿಕ್ಷಿಸಿದೆ ಮೃತ್ಯುವಂ ನತನ ಮೊರೆಯಂ ಕೇಳ್ವು । ಪೇಕ್ಷಿಸುವರೇ ಭಕ್ತಭಕ್ತನೆಂಬೀ ಬಿರಿದನುಳಿವರೇ ದೇವ ನಿನ್ನ॥ ಈಕ್ಷಿಸಿದ ಮಾತ್ರದಿಂ ಸರ್ವಭಯ ಮುಡಗಿದಪ್ಪು। ದಕ್ಷೀಣಮುಹುಮನೀನೇಕೈಯೊಳಿದುರ್ಗಮಿತ। ರಕ್ಷೋಭೆಯಾಕೆಂದು ಭೂಮಿ ಪಂಪೊಗಳಲ್ಕರಾಮು ಕೇಳ್ಕಾತುಕವನು॥೩೦॥ ವಿಸ್ತರಿಪೆನೇನ ನೆಲೆರಾಮು ಸೇತನೃಪಾಲ। ಹಸ್ತದೊಳು ಪೂಜೆಗೊಂಬತುಳ ತರಲಿಂಗಮೇ। ಮಸ್ತಕದ ಬಾಂದೊರೆಯ ಪೆರೆಯ ಕೆಂಜೆಡೆಯ ನಯನಾವಳಿಯ ಪಂಚಾಸ್ಯದ ॥ ನ್ಯಸ್ತ ಸುಶಿರೋಮಾಲೆಗಳ ಗಳದ ಫಣಿಗಳೆಸ। ಮಸ್ತಭೂಷಣದ ನಿಜಮೂರ್ತಿಯಂ ತೋರೆಯ ಮ। ನಸ್ತಮಿಸಿದಂ ನಯನವಹ್ನಿಯಿಂ ಶಿವಭಕ್ತರಳಲದೇಂ ಪಥ್ಯಮಹುದೆ॥೩೧॥ ಹೃದಯದೊಳು ತಲ್ಲಣಿಪೆ ದಿವಿಜರಂ ಕರೆದು ನೀಂ। ಬೆದರದಿರಿಯೆಂದು ಭಕ್ತಂಗೆ ಮಾಡಿದದ್ರೋಹ। ಮದು ಕೊಂದುದಿವಸಂ ಸಮಸ್ತ ಲೋಕದೊಳೆನ್ನ ಭಕ್ತರೇ ಪ್ರಾಣಮೆನಗೆ॥ ಇದನೋಡಿ ನಡೆವುದಿಂತೆಂದ ಮುರರಂತ್ರಿಳಿಪಿ । ಮುದದಿಂದ ರಂಭೆಯಂ ಕರೆದು ನೀಂ ಶ್ವೇತಂಗೆ। ಮೊದಲನುಷ್ಠಿಸಿದೆ ನೀನೇ ಭಕ್ತಫಲರೆಂದು ಸೇತನಂ ಮನ್ನಿಸಿದನು॥೩೨॥ ಸರಸಿಜೋದ್ಭವ ನಾಗಲಖಿಳದೇವ ವ್ರಾತ। ವೆರಸಿ ಶಂಕರನ ಪಾದಾಂಬುಜದೊಳಡಿಗಡದು । ಮರಳಿ ಮುಟಿದೆದ್ದು ದೇವರದೇವ ನಿನ್ನ ಭಕ್ತದ್ರೋಹದಿಂ ಕಾಲನು॥ ಉರಿಯೊಳುರಿದ ಮುಮ್ಮಂದೆ ಪಾಪಪುಣ್ಯಂಗಳಿಂ। ಧರಣಿಯೊಳಗೆಂತು ನಡೆದಪವು ಜೀವರ್ಗೆಂತು। ಮರಣಭಯವಾದಪುದು ಬುದ್ಧಿಗಲಿಸೆಂದು ವಿಧಿ ತುತಿಸಿದಂ ಭಕ್ತಿಯಿಂದ॥ ನಾರಿರುಹಸಂಜಾತ ನಿನ್ನನುಡಿ ತಥ್ಯವಹು। ದಾರೆಮ್ಮ ಭಕ್ತರಂ ಮೀರಿದರವರ್ಗೆ ಸಂಹಾರವೇ ವಿಧಿಯಂತೆ ದಹಿಸಿದೆವು ಯಮನಸೀಂ ಬದುಕಿಸುವುದನುಚಿತಮೆನೆ ॥ ಮಾರಹರ ಸರ್ವಾಪರಾಧಮಂ ಕ್ಷಮಿಸೊಂದು। ಬಾರಿಗೆಂದಂಬುಜಾಸನನ ಭವನಡಿಗೆರಗೆ। ಕಾರುಣ್ಯದಿಂದಿತ್ತನಸುವನೆ ನೆಮಲಗಿದವರೇಳ್ವಂತೆ ಯಮನೆದ್ದನು ॥೩೪॥ ಮೊಳಗಿದವು ದೇವದುಂದುಭಿ ಸುರಿದವರಲಮಳೆ। ಸಲವೇರಿದಂ ಶ್ವೇತನಂ ಬುಜಭವಾದ್ಯಮರ। ಕುಲಮೃದೆ ಕೊಂಡಾಡಿತ ಭವಸತ್ತಿಯ ಮನೋಳ್ದು ಕೈಗಳಮುಗಿದು ಕೊಂಡು॥ ಸಲಹೆನ್ನ ನೆಲೆಶಿವ

ಭುಸರ್ವಪಾತಕನನ|ಸ್ಖಲಿತವುೂರ್ಗ್ಗನನಜ್ಞನಂತಾಮುಸನನಲಿದು|ಸ ಲೆನೆನದೆನಪರಾಧಶತವುನೆಂದಂತಕಂಸರನಡಿಯೊಳೆದೆಗೆಡದನು ‖ ಹರಹರಾತ್ರಾಹಿಸರ್ವೇಶ್ವರತ್ರಾಹಿಶಂ । ಕರಪಾಹಿಯೆಂದುಕಾಲಂ ಸ್ತುತಿಸೆಶಂಕರಂ|ಕರೆದುನೀನೆಮ್ಮಭಕ್ತದ್ರೋಹವುಂಮಾಡಬೇಡೆನು ತೆಸೇತಸಹಿತ‖ತೆರಳಿದಂಕೈಲಾಸಕಂತಕಂತನ್ನವ| ಗಿರದೆನೇಮಿ ಸಿರುದ್ರಮುದ್ರೆಯಂತಾಳ್ದವರ । ಪೊರೆಗೈದಬೇಡೆಂದುಪುರಕೈದಿದಂ ಪರೆದರಮುರರಾಬ್ರಹ್ಮಸಹಿತ ‖ ೨೬‖ ಇಂತೆಸವಚೆನ್ನಬಸವೇಶ್ವರ ಪುರಾಣವುಂ|ಸಂತಸದಿಬರದವರ್ಗೋದಿದರ್ಗರ್ಥವಾ|ದ್ಯಂತವುಂಬಿ ಡದೆಪೇಳ್ದರ್ಗೆಪರಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ‖ ಸಂತತಂಸಕಲಸು ಖವುಂಸಕಲಭೋಗವುನ| ನಂತಸೌಭಾಗ್ಯವುಂಕೊಟ್ಟುರಕ್ಷಿಸುವ ನಾ|ಕಂತುಹರನಪರಾವತಾರನೆನಿಸುವಚೆನ್ನಬಸವೇಶನಕ್ಕರಿಂದಂ‖

ನಾಲ್ಕನೆಯಕಾಂಡದಲ್ಲಿ೧೧ನೇಸಂಧಿ ಮುಗಿದುದು

ಅಂತುಸಂಧಿ ೪೧ಕ್ಕಂ ಪದ ೨೧೪೨ಕ್ಕಂ ಮಂಗಳ.

## ✻ ೧೨ನೇಸಂಧಿ ✻

ಸೂಚನೆ‖ ಹರಭಕ್ತಗೌತಮನಶಾಪದಿಂಋಷಿಗಳಂ|ದಿರದೆ ಪಾಷಂಡಮತರಾಗಿರಲುಶಂಕರಂ| ಕರುಣದಿಂಸುಕಮೂರ್ತಿ ಯಾಗಿನಂದೀಶನಿಂತತ್ವಮಂಪೇಳಿಸಿದನು‖

ಪದ‖ ಪೊದೆದನಿಜವಸ್ತ್ರವುಂಕಂಡುಕಡುಭೀತಿಯಿಂ|ಬೆದರಿಕರ ದಿಂದಿಳಿಯುಬೀಳುತೆಡದೊಡೆಯೊಳಿಹ| ಸುದತಿಯುವಿರಾಜಿಸುವನ ಗೆಗಂಗಳಂಕಾಣುತುಸ್ಮಿತ್ವವನೆತಳೆದು ‖ ಗದಗದಿಪಕರಕಮಲ ವುಂಕಂಡುದಂತಿಚ| ರ್ಮದಹೊದಿಕೆಯಿಂದದಂಮುಚ್ಚಿಕರತಳೆದಿನಂ| ಕದಸತಿಯುನಯುನವುಂಮುಚ್ಚಿಸುಂತೈಸುವವಿರೂಪಾಕ್ಷಸಲಹೆಮ್ಮ ನು‖೧‖ಇನ್ನಾಲಿಸೈರಾಮುದಂಡಕಾರಣ್ಯದೊಳು । ಮುನ್ನಗೌತ ಮುಮುನೀಂದ್ರಂಸಕಲಶಾಸ್ತ್ರಸಂ| ಪನ್ನನಾಗಿರುತೆಶನಿರೋಹಿಣೀಶ ಕಟವುಂಭೇದಿಸುವನಿಳೆಯೊಳಿನ್ನು‖ ಪನ್ನೆರಡುವರುಷಪರಿಯಂತ ರಂಬರವಪ್ಪು|ದಿನ್ನಿದಕುಪಾಯುವುಂಕಾಣ್ಬನಾನೆಂದೆನುತೆ| ಪನ್ನ ಗಾಭರಣನಂಕೂರ್ತುಮುನಿಪಾಲಕಂತೊಡಗಿದಂಘನತಪವನು ‖ ತ್ರಿಳಿದನೀಶಂಮುನದೊಳೀಗೌತಮುಂತನ್ನ| ನೊಲಿಸಿಮಾಡುವತಪ ಸ್ಸೆಂದುಕರುಣದೊಳಾಗ‖ ನಳಿನಾಕ್ಷನಂಕರೆದುಬೆಸಸಿದಂನೀನೀಜಗ ತ್ರಿಂಗೆಕರ್ತನೆಂದು‖ಇಳೆಗೈದಿಗೌತಮುನಕೂಡೆವಾದಹಮಾಡಿ| ಬ ಳಿಕಬಹುದೆನಲಂಜುವಂದೇವನೀವಿದುರ್ । ತಿಳಿಯುಲಾಂಕರ್ತನಹ

ಪರಿಯೆಂತು ವಾದವಂ ಮಾಡಲಂಜುವೆನೆಂದನು ॥೩॥ ಎನಲೀಶ್ವರಂ ನೆ
ಕ್ಕ ಹರಿಯುಜಠರಪೀಳೆಯಿಂ। ಘನತರದ ವೈಷ್ಣವಾಕೃತಿಯನಂಗೀಕರಿ
ಸು। ತನುಲಯದೊಳಾತ್ರ್ಯಂಬಕಪರ್ವತಕ್ಕೈದಿಗೌತಮನ ಮುಂ
ದೆ ನಿಂದು ॥ ಮುನಿಪಾಲ ನೀನಾರಕುರಿತು ತಪವಂ ಮಾಳ್ಪೆ। ನಿನಗೆತಿ
ಳುಪೆನಲಾಗ ಕಣ್ದೆರದು ನೋಡಿಯಾಂ । ಮನಸಿಜಾರಿಯನೊಲಿಸೆ
ಮಾಳ್ಪೆನೆನೆ ಕಪಟವೈಷ್ಣವನಗುತ್ತಿಂತೆಂದನು ॥೪॥ ಹರನೀವನೈ ನಿನ
ಗೆ ವರವನದನಿಶ್ಚಯಂ। ಮರುಳೆ ನಿನಗೇತಕಜ್ಞಾನವಾ ಶಂಕರಂ। ತಿರು
ಕಂದಿಗಂಬರಂ ಬೂದಿಬಡುಕಂ ಮಸಣಗಾಹಿಯೆಲುಮಾಲೆಗೊರಲಂ ॥
ಪರಿಕಿಪೊಡೆ ಸಂಹಾರಕಾರನಾತನ ಬಿಟ್ಟು। ಹರಿಯನೇ ಭಜಿಸಿದೊಡೆ
ನಿನ್ನಿಷ್ಟಮಂ । ಕರುಣಿಪಂ ನಾವಿಷ್ಣು ಪೃಥ್ವೀಪತಿಯೆಂಬ ಸುತಿವಚನ
ಮುಂಟಂತದಾಗಿ ॥೫॥ ಹರಿಯೆ ಸಜ್ಞಾನರೂಪಂ ನಿತ್ಯನಚ್ಯುತಂ। ಪರ
ಮಪುರುಷೋತ್ತಮಂ ಸಕಲರಂ ರಕ್ಷಿಪಂ। ಸಿರಿಯರಸನೆಸೆವ ಪೀತಾಂಬ
ರಧರಂ ಕೌಸ್ತುಭೋರಸ್ಥಲಂ ಸಾತ್ವಿಕಂ ॥ ಉರುತರ ಜಗತ್ಕರ್ತನಾತ
ನೇ ಬ್ರಹ್ಮಾದಿ। ಸುರರೊಡೆಯನಹಿತರಂ ಸಂಹರಿಸಿ ಶಿಷ್ಟರಂ। ಪೊರೆವುತಿ
ರ್ಪಂ ಸರ್ವಮುಂ ವಿಷ್ಣುಮಯ ಜಗತ್ತೆಂಬ ಸುತಿಯುಂಟದಾಗಿ ॥೬॥ ಹ
ರನತಿರಹಸ್ಯದಿಂ ರಾಮಮಂತ್ರವನಂದು। ಗಿರಿಜೆಗುಪದೇಶಮಂ ಮಾ
ಡಲಾ ಶಿವೆಯೊಲ್ದು। ಕರುಣದಿಂ ಕಾಶಿಯೊಳಗಳಿವವರ ಕರ್ಣಂಗಳೊ
ಳಗೆ ಬಿಡದೀ ಮಂತ್ರಮಂ ॥ ಒರೆಯಲವರಿರದೆ ಸದ್ಯೋನ್ಮುಕ್ತರಪ್ಪ
ರೌ। ಪರಮ ಕಾಶಿಯೊಳೆ ವೇದವ್ಯಾಸನೆಂದೆಂಬ। ವರಮುನೀಶಂ ನದ್ವೈ
ವಂ ಕೇಶವಾತ್ಪರಂ ಎಂದು ತಾಂ ಕೈಯೆತ್ತನೆ ॥೭॥ ಇನ್ನು ಕೇಳೈ ಮುನಿ
ಪ ರುದ್ರನೊಲವಿಂದೆ ಕೊಟ್ಟನ್ನ ತಪದಂಗಳಂ ಹರಿ ತೆಗೆದು ರಕ್ಷಿಸನೆ। ಬ
ನ್ನಬಡಿಸುತ್ತೆ ಖಳರಕ್ಕಸರನೆಲ್ಲರಂ ಸಂಹಾರವಂ ಮಾಡನೆ ॥ ತನ್ನ ನಾ
ಭಿಯ ಕಮಲದಿಂದಜನ ಪಡೆಯನೇ। ಚನ್ನಾಗಿ ಹರಿಯನೇ ಭಜಿಸಲಾ
ತಂ ನಿನಗೆ। ಸನ್ನುತಪದಂಗಳಂ ಕೊಟ್ಟು ರಕ್ಷಿಸುವನಿದು ನನ್ನಿ ನೀಂ ಕೇ
ಳೆಂದನು ॥೮॥ ಎಂದಿಂತು ಕಪಟವೈಷ್ಣವನುಸುರೆ ಕೇಳ್ದು ಕಡು। ನೊಂ
ದು ಮುನಿನಾಥನಾನಜ್ಞನೇ ಕೇಳೆಲವೊ। ಮಂದಮತಿ ವೈಷ್ಣವಂ ನೀಂ
ನಿನಗೆ ಶಿವನ ಮಾಹಾತ್ಮ್ಯಮಂ ತಿಳಿಯಲಳವೆ ॥ ಇಂದುಧರನತ್ಯತಿಷ್ಠದ್ದ
ಶಾಂಗುಲನಭವ। ನೆಂದು ಕೇಳೇಕಮೇವಾದ್ವಿತೀಯಂ ರುದ್ರ । ನಂದು
ಸುತಿವಚನಮುಂಟರಿಯದಾ ಹರಿಗಿರಿಯ ಸರಿಯೆಂದು ನುಡಿಯಬ
ಹುದೆ ॥೯॥ ಹರಿಯೆ ತಾಜ್ಞಾನರೂಪಾದೊಡಾ ಭೃಗುಮುನಿಪ। ನರಸಿ
ಯನದೇತಕಜ್ಞಾನದಿಂ ಕೊಂದನಂ। ದಿರದೆ ಮತ್ತಚ್ಯುತಂ ತಾನಾಗಸ

ತ್ತುಸತ್ತ್ವಂಹುಟ್ಟಿತಿರಲೇತಕೆ॥ ಪರಮಪುರುಷೋತ್ತಮಂತಾನಾಗೆ
ಕಳವಿನಿಂ। ಪರಸತಿಯರಂಬಯಸಲೇಕೆಸರ್ವಂವಿಷ್ಣು। ಪರಮಯಮ
ದಾಗೆತನ್ನರಸಿಯಂಕದ್ದುಕೊಂಡೊಯ್ವಾಗಳೆಲ್ಲಿರ್ದ್ದನು॥೧೦॥ ಹರಿಯೆ
ರಕ್ಷಾಕರ್ತೃವೆಂದೆಲಾಮರುಳೆಕೇ। ಳ್ದರನಂದು ತನ್ನಮಗನಂದಹಸಿ
ಕಾಣುತ್ತೆ। ಮರಳಿರಕ್ಷಿಸದಾದನೇತಕ್ಕೆ ಸಿರಿಯೆತನ್ನರಸಿಯಾದೊಡೆ
ಧರೆಯೊಳು॥ ಧೊರೆಗಳಂಸೇರಿಪರ್ಕಾರಣಮದೇತಕ್ಕೆ। ಹರಿಯಿನಾಹಗ
ತ್ತಿಂಗೆಕರ್ತನಾದೊಡೆತಾನೆ। ಮರಳಿಮಮಕರ್ತೃಂಮಹೇಶನೆಂದೆನ
ಲೇಕೆವೈಷ್ಣವನೆಕೇಳೆಂದನು॥೧೧॥ ರಾಮಮಂತ್ರವೆಶಿವನನಿಜನಾಮ
ವದನರಿದು। ಪ್ರೇಮದಿಂಜಪಮದಗ್ನಿದಶರಥರ್ಮಕ್ಕಳಂ। ರಾಮರೆಂದೇಕ
ಶೆಯೆನಾಮಕ್ಕೆಯೋಗ್ಯರಲ್ಲದೆಪಟ್ಟಕರುಹರಹರೆ॥ ಆಮಂತ್ರಮಂಗಿ
ರಿಜೆಬೋಧಿಸಲ್ಕಳಿದವರ್ಗಳೇಮರಾಗುದ್ಭವಿಪರಲ್ಲದಾಪರಶುರಘು
ರಾಮರಾಗುದ್ಭವಿಪರೇಯಥಾಬೀಜಂತಥಾಂಕುರಮುಮೆಂದುದಾ
ಗಿ॥೧೨॥ ಪರಮಕಾಸಿಯೊಳೆವೇದವ್ಯಾಸನಕ್ಕರಿಂ। ಹರಿಯುಲ್ಲದಿಲ್ಲೆಂ
ದುಕೈಯೆತ್ತಲಾತೋಳೆ। ನಿರದೆನಂದೀಶ್ವರಂಮುರಿಯೆನೇಮರುಳೆಭ
ಸ್ಮಾಸುರನದಶಕಂಠನ॥ ಪರಮೇಶನೊಲಿದಿತ್ತವರದಿಂದಲವರನಾ। ಹ
ರಿಕೊಂದನೈಸೆಕೇಳೀಶ್ವರಾಜ್ಞೆಯವಿಚಾರಿ। ಹರಿಗಿರಿಯಜಂಗಿಜಂಸಾಮ
ರ್ಥ್ಯರೇ ಹರಿಯಮಗನಜನತಲೆಯೆಸಾಕ್ಷಿ॥೧೩॥ ಹರನವರದಿಂದಲು
ಪಮನ್ಯುಮುನಿಕೀರಜಾ। ಗರವನುರೆಪಡೆದುತತ್ಕ್ಷೀರಮಂಸೇವಿಸು।
ತ್ತಿರಲದರೊಳಿರ್ದ್ದಕೃಷ್ಣಂಬಂದು ಬಾಯ್ಗಾನಲುಗುಳಲದರೊಳಗೆಬಿ
ದ್ದು॥ ಮರಳಿಬರೆಕಂಡುಕಡೆಗುಗುಳಲಾಹರಿಮುನಿಯ। ನಿರದೆತುತಿ
ಗೈದುಶಿವದೀಕ್ಷೆಯಂಕೊಡುವುದೆನೆ। ಕರುಣದಿಂದಾಹರಿಗೆದೀಕ್ಷೆಯಂ
ಮುನಿವರಂಕೊಟ್ಟುದಂಕೇಳ್ದರಿಯಲಾ॥೧೪॥ ವರದಧೀಚಿಯಕೊ
ಡೆಕ್ಷುಪನಾಗಿಕಾಡಲಾ। ಹರಿಯಚಕ್ರವನುಡಿದುಬಿಸುಟುಬೆಂಬತ್ತ
ಲಾ। ಧುರದೊಳಿಟ್ರಾನಲುರದೆತಲೆಯಕದರಿಕೊಂಡೋಡಿದಂಕೇ
ಳ್ದರಿಯಲಾ॥ ಪರಮಪಾವನಚರಿತ್ರಂಭೃಗುಮುನೀಶನಾ। ಹರಿಯು
ರಮನೊದೆಯಲದುಕಂಡಿಕಲೆಯಾಗಲದು। ಹರಿಗೆಸಿರಿವತ್ಸಲಾಂಛನ
ನೆಂಬಪೆಸರಾಯ್ತೆಂದುಮುಂಕೇಳ್ದರಿಯಲಾ॥೧೫॥ ತಾರಕಾಸುರ
ನೊಡನೆಕಾದಿಮುರಿದೋಡಿಹರಿ। ಕ್ಷೀರಾಬ್ಧಿಯಂಪೊಕ್ಕುಮೈಗರೆ
ದುಬದುಕಿದಂ। ವೀರನಾಕಲಿಜಲಂಧರನೊಡನೆಕಾದಲವಪಿಡಿದುನಿ
ಡುಬೊಗರಿಯಂತೆ॥ ತಾರಾಪಥಕ್ಕೆಹಾಯ್ದದನದಿಪ್ಪತ್ತೊಂದು। ಬಾ
ರಿಮತ್ತಾಹರಿಯಪಿಡಿತಂದುಮನೆಯೊಳೆಗೆ। ಘೋರಬಂಮೂರುನಿ

ಬರ್ದವೆರುಷಭೆರಿಯಂತೆರಂನೆರೆಯುನಿಟ್ಟುದರಿಯ ॥೧೬॥ ಹರಿಯು
ನೇಮದೊಳಜಂಸೃಷ್ಟಿಸಲ್ಕಾಣುತಾ। ಕರಿಮುಖಂತನ್ನಪಾರ್ಥಿಸಿದು
ದಿಲ್ಲೆನುತೆಲಾ। ಹರಿಯುಜಗರ್ದದೆಶಾಪವನೀಯಲವರೊಬ್ಬರೊಬ್ಬ
ರುದರವನೆಪೊಕ್ಕ ॥ ಬಳಲಾರದಾಹರಿಯುನಾಭಿಯಿಂದಜನುದಿಸೆಸ
ರಸಿಜೋದ್ಭವನೆಂಬಪೆಸರಾಯ್ತುಮತ್ತೆಕೇಳ್ಹರಿಯುಜನಗುದಧಿನು
ಗ್ಘವಿಸಲಾಹರಿಗಧೋಕ್ಷಜನೆಂಬಪೆಸರಾದುದು ॥೧೭॥ ಹರಿಯುಜರು
ಮತ್ತೆಮತ್ಸರದಿಂದೆಕಾದುತಿರ। ಉರುಲಿಂಗವುದಿಸೆಕಂಡದರಪದ
ಮಸ್ತಕವ ಹರಿಯುಜರುಹಂದಿಹಕ್ಕಿಗಳಾಗಿಕಾಣಲಾರದೆನುತಿಸಿಬ
ಳಿಕಶಿವನ॥ ಕರುಣವಂಪಡೆದುಸುಖಮಿರುತಜಂಮತ್ತಹಂ; ಕರಿಸ
ಲಾತನತಲೆಯುನರಿದಭವನ್ನೈತಂದು। ಹರಿಯುಮನೆಯಂಪೊಗಲುನಿ
ಲಿಸೆವಿಷ್ವಕ್ಸೇನನಂತ್ರಿಶೂಲದೊಳಿರಿಯನೆ॥೧೮॥ ಹರನಭರವಂಕಂ
ಡುಹರಿತನ್ನಪಣೆಯನೆ। ತ್ತರನಜಕಪಾಲಕಾಗಂಬಿನ್ಯಾಸಾಹಸ್ರ।ವೆ
ರುಷಪರಿಯಂತರಂಕರೆದಾಗಪರಶಿವನಕರುಣವುಂತಾಪಡೆಯನೆ।ವೆ
ಠಜಲಂಧರನಸಂಹರಿಪಿದಾಚಕ್ರವಂ। ಹರಿಹರನಕೂರ್ತಪವಂಮಾ
ಡಿಬಳಿಕಲಾ। ಪರಶಿವನನೊಲಿಸಿತಚ್ಚಕ್ರವಂಪಡೆಯನೇವೈಷ್ಣವನೆ
ಕೇಳೆಂದನು ॥ ೧೯ ॥ ಭೂಲೋಕವಂತೀವಿದುದುಕದೊಳುವಿಷ್ಣು
ವೆಂ। ದಾಲದೆಲೆಯೊಳುತ್ತೇಲುತಮ್ಮ್ರಳುಗುತಿರೆಶಿವಂ। ಲೀಲೆಯಿಂ
ದಾಗಂಗೆಯಂನುಣ್ಣಿಕಾಕುಸುಮದೋಲ್ಧರಿಸನೇಜಡೆಯೊಳು॥ ಕಾ
ಳಕೂಟಂಸಕಲಜಗಮನುರುಪಲುಸುರರು। ಘೋಳಿಟ್ಟುಶಿವಗೆಮೊ
ರೆಯಿಡೆಕೇಳ್ದುತದ್ವಿಷವ। ನೀಲಮಣಿಯಂತಭವಕಂಠದೊಳುತಾಳ್ದು
ವರರಕ್ಷಿಸನೆಕೇಳ್ದರಿಯುಲಾ॥೨೦॥ ಮಾರಾರಿಯುಲ್ಲೆಂದುದಕ್ಷನತಿಗರ್ವ
ದಿಂ। ನಾರಾಯಣಂಗಗ್ರಪೂಜೆಯಂಕೊಟ್ಟಿರದೆ। ವಾರಿಜಾಸನಮುಖ್ಯ
ದೇವತೆಗಳೆಂನೆರಪಿಯಾಗವಂಮಾಡುತಿರಲು॥ ವೀರಭದ್ರಂಸಕಲದಿವಿ
ಜರಂಭಂಗಿಸಲು। ವಾರಿಜಾಕ್ಷಂಕಾದಿಯೆಂರಳೆಯಾಗೋಡುತಿರೆ। ಕೂ
ರಲಗಿನಿಂದೆಚ್ಚುಪರಣಮಂಹಾಯ್ದುತಚ್ಚಕ್ರವಂಪೊಡೆದನರಿಯ॥ ಸಿ
ರಿಯುಮುಂದಲಗೂಯ್ದುವಿಧಿಯುಪಣೆಯಂಪೊಯ್ದು। ಸುರಸತಿಯುನಾ
ಸಿಕವನರಿಸಿಚಂದ್ರನನೊರಸಿ। ಸುರಪತಿಯತೋಳ್ಗಳಂಕುತ್ತಿಶಚಿ
ಗಚ್ಚೊತ್ತಿಶಿಖಿಯುನಾಲಿಗೆಯಸೀಳಿ॥ ವರುಣನಂತುಳಿದುಪೂಷಣಪ
ಲ್ಗಳಂಕಳೆದು। ಮರುತನೂರಂಕಡಿದುಭಗನಕಂಗಳನೊಡೆದು। ಸುರ
ರೊಳಗ್ಗಳೆಯರಂತರಿದುಸ್ವಾಹಾಸ್ತನಂಗಳನರಿಯನೇವೀರನು॥೨೧॥
ತಾರಕಾಸುರಜಲಂಧರರಂಧಕಾಸುರಂ। ವೀರವಿದ್ಯುನ್ಮಾಲಿಕಮಲ

ಲೋಚನನೆಸವ । ತಾರಕಾಕ್ಷಂಗಜಾಸುರಸಿಂಹಬಗ್ಗಬಿಯುಳಾಸುರ
ರ್ಮ್ಮೃತ್ಯುರಾದ॥ಕ್ರೂರರಕ್ಕಸರನುರೆಕೊಂದಾಗಸುರರನತಿ। ಕಾರುಣ್ಯ
ದಿಂ ಕಾಯ್ದು ರಕ್ಷಿಸನೆ ಕೇಳ್ಮರುಳೆ। ಮಾರಾರಿಯೋದುಷ್ಟನಿಗ್ರಹಂಶಿಷ್ಟ
ಪರಿಪಾಲನೀನೆಂದರಿಯುಲಾ॥೧೩॥ ನೆಟ್ಟನಾಕಾಲಕಾಮತ್ರೈಪುರಂ
ಗಳಂ। ಸುಟ್ಟುರುಪನೇಶಿವಂಪಶುಪತಿಯುಪಟ್ಟಮಂ। ಕಟ್ಟಿಸರ್ವೇಂದ್ರಿ
ಯುಕ್ಕಕ್ಷಿಗಾತ್ರಸ್ಯಶಿರಸಪ್ರಧಾನಂಗಳೆಂದು॥ ವಿಟ್ಟುಗಂಬೊಮ್ಮಗಂಕ
ಣ್ತುಳಗಳಂಶಿವಗೆ। ಕೊಟ್ಟುಡಿಂಗರಿಗರಾದವರನೀಶಂಗೆಪಡಿ । ಗಟ್ಟುವ
ರೆಕೇಳೆಲೊಭ್ರಷ್ಟವೈಷ್ಣವನಿನ್ನ ವಿಷ್ಣುವಿನವಿಧಿಯುನಿನ್ನ ॥೧೪॥ ಗೋ
ಪನಾಭೃಗುವಿನರಸಿಯುಹತಿಸಲಾಮುನಿಪ। ಕೋಪದಿಂದಶಯೋನಿ
ಯೊಳುಪುಟ್ಟುಪೋಗೆಂದು। ಶಾಪಮಂಕೊಡಲದಂಕೈಕೊಳುತ್ತಾವಿ
ಷ್ಣುಶರಧಿಯೊಳುಪೊಕ್ಕುಮತ್ಸ್ಯ ॥ ರೂಪಿನಿಂಸೋಮುಕನಕೊಂದ
ಹಂಕರಿಸಲಗ। ಚಾಪನಾಮತ್ಸ್ಯಮಂಕೊಂದುನೆಟ್ಟೆಲುವನುರೆ। ತಾ
ಪಿಡಿಯೆವಿಷ್ಣುಕಂಕಾಳಧರನೆಂಬಪೆಸರುಂಟದಂನೀನರಿಯುಲಾ॥೧೫
ಶರಧಿಯುಂಮಥಿಸಲದಕಾಧಾರವಾಗಿಯಾ। ಹರಿಕಮಠರೂಪಿನಿಂತಾ
ಳಿದುರ್ಬಳಿಕಹಂ। ಕರಿಸಲಾಕಮಠನಂಕೊಂದದರತಲೆಯನುರುಹಾ
ರದೊಳುಶಿವಧರಿಸನೆ ॥ ಧರಣಿಯಂಕದ್ದುಕೊಂಡೊಯ್ದಕನಕಾಕ್ಷ
ನಂ ಹರಿಹಂದಿಯಾಗಿತದ್ದನುಜನಂಹತಿಸಿತಾ । ನಿರದಹಂಕರಿಸಲಾ
ಕ್ರೋಡನಂಕೊಂದದರಕೋರೆಯಂಹರಪಿಡಿಯನೆ ॥೧೬॥ ಹರಿಹರಿ
ಯುರೂಪಿನಿಂಖಳಹಿರಣ್ಯಕಶಿಪುವ। ನಿರದೆಸಂಹರಿಸಿನೆತ್ತರ್ಗುಡಿದಹಂ
ಕರಿಸೆ । ಶರಭಾವತಾರದಿಂದಾಹರಿಯ ಹರಿಸಿತಚ್ಚರ್ಮವಂಶಿವಪೊದೆ
ಯನೆ॥ ಹರಿಸುರಪನನುಜನಾಗುಟಸಿಬಂದಾಬಲಿಯ। ನಿರದೆಬಂಧಿಸಿ
ತ್ರಿವಿಕ್ರಮರೂಪಿನಿಂಬಳೆಯೆ। ಹರನವನಸಂಹರಿಸಿಬೆನ್ನನೆಟ್ಟೆಲುವಖ
ಟ್ವಾಂಗವಂಮಾಡಿಕೊಳನೆ॥೧೭॥ ಕ್ರೋಮದಿಂಜಮದಗ್ನಿಯುರಸಿಯು
ದರದೆಪರಶು। ರಾಮಪೆಸರಿಂದೊಗೆದುಚತ್ರಿಯರಹತಿಸಿರಘುರಾಮ
ನೊಡನಿರದೆವಾದವಮಾಡಿಸೋಲುತ್ತ ಶಕ್ತಿಯುನೀಗಿದುಃಖದಿಂದಂ ॥
ಭೂಮಿಯಂಭೂಸುರರಿಗಿತ್ತುಶಿವಲಿಂಗವಂ। ರಾಮೇಶನೆಂದುಪೂ
ಜಿಸಿತನ್ನಭವವನಿ । ರ್ನಾಮಮಂಮಾಡಿತಪಿಸುತಿರ್ಪಕಥೆಯುನೀ
ನೆಂದುಮಂಕೇಳ್ದರಿಯುಲಾ॥೧೮॥ ರಾಮವೆಸರಿಂದೆದಶರಥನರಸಿಗುದಿ
ಸಿತಾಂ। ಭೂಮಿಸುತೆಯಂಮದುವೆಯಾಗಿವನವಾಸದೋ। ಳ್ಕಾಮಿ
ನಿಯನೀಗಾಡಿಕೊಂಡುರಾವಣನಿಂದೆ ನೊಂದುತಾನವನಕೊಂದು॥
ಪ್ರೇಮದಿಂಸೀತೆಯಂತಂದುಸುತರಿಂದೆಸಂ। ಗ್ರಾಮದಿಂದಳಿದುಮು

ಸುವಿಶಾಧೀಶಕಿಂ| ನರಯಕ್ಷರಾಕ್ಷಸಪಿಶಾಚಗುಹ್ಯಕಸಿದ್ಧಗರುಡಗಂ
ಧರ್ವವಿದ್ಯಾಧರಕಿನ್ನರಂಪುರುಷರುರಗಮನುಮುನಿಮುಖ್ಯರು|| ಪರ
ಮಶಿವಲಿಂಗಂಗಳಂಧರಿಸಿತಂತಮ್ಮ| ಮರಣಂಗಳಂನೀಗಿಯಮರರಂ
ದೆನಿಸಿದರ್ಮ್ಮರುಳೆನೀಂಕೇಳೆನಲುನಸುನಗುತ್ತಾಕಪಟವೈಷ್ಣವನದಿಂ
ತೆಂದನು||೩೬|| ಹರನಲ್ಲದಿಲ್ಲೆಂದುನುಡಿವುದಿದುಸತ್ಯವೇ| ಹರಿಯಲ್ಲ
ದಿಲ್ಲೆಂದುಭಾಳದೊಳಗಕ್ಷಿಯುಂ| ಬಿರದೆತೋರುವನೆನಲುತೋರೆನೆ
ಲುಕಪಟವೈಷ್ಣವನಾಗಕೋರಿಮುನಿಪ|| ಹರನಲ್ಲದಿಲ್ಲೆಂದುಪಾದದೊ
ಳಗಕ್ಷಿಯುಂ| ಮರುಳೆವೈಷ್ಣವನೋಡೆನುತ್ತೆ ತಾಂತೋರಲಂ| ಕರುಣ
ದಿಂಮುನಿವರನನಿಷ್ಠೆಯುಂಹರಿಯವೈರಾಗ್ಯರಿಗಭವತೋರಿಸಿದನು||೩೭||
ನೆಟ್ಟಿಗಂಮುನಿವರನಶೈವಭಕ್ತಿಗೆಶಿವಂ| ಮುಟ್ಟಿದಂಕೃತಕವೇಷವ
ನಾತನಿದಿರಿನೊಳು| ಬಿಟ್ಟಿದಂನಿಜಚಿಹ್ನಮಂಹರನವರೋಮಾಂಚನದ
ಸುಗ್ಗಿತಳೆದೋರಲು|| ಪೆಟ್ಟಿಗಂವಿಲಸಿತಾನಂದಾಶ್ರುಧಾರೆಯುಂ| ಕಟ್ಟಿ
ದಂಕಾಯಮಂಪಾರ್ವತಿಗದೇಹವಂ| ಪಟ್ಟಿಗೊಟ್ಟಭವಸರ್ವ್ವಾಪರಾ
ಧಂಗಳಂಕ್ಷಮಿಸೆಂದುನುತಿಯಿಸಿದನು||೩೮|| ಅಕಟನೀನೆಂಗನುಡಿ
ಯೆನಗೆಮಿಥ್ಯಾಪಮಗನೆ| ಚಕಿತನಾಗದಿರುನಿಂನಿಷ್ಠವೇನೆಂದುಮಾ| ಸ್ತ
ಕವನೆತ್ತಲುಬಿತ್ತಿಗಾಕ್ಷಣಂಸಕಲಧಾನ್ಯಂಬೆಳೆ[illegible]ವುದೆನಲು|| ಅ
ಕುಟಲಂಗಾವರವನಿತ್ತುಮನ್ನಿಸಿತ್ರಿಯಂ| ಬಕನ್ಯೈದಿದಂರಜತಗಿರಿ
ಗೊಮ್ಮ್ರರೋಹಣೇ| ಶಕಟಮಂಶನಿಭೇದಿಸಲ್ಲಾಗಪನ್ನೆರಡುವರು
ಷಂವರುಷವುಡಗಿತು||೩೯|| ಉದಯದೊಳುನೋಡೆಮುಜನಮುಳಿ
ಧರಿತ್ರಿಯುಂ| ಪುದಿದಿಹುದುವುಗ್ಯಾಗ್ನದೊಳುಘನಾಡಂಬರಂ| ಬೆ
ದರಿಸುವವಾಗಸಂರಾತ್ರಿಯೊಳುನಿಗ್ರಹಸಮುಹುದಿಂತುದಿನದಿನದೊ
ಳು|| ಉದಿರೆಲೆಗಳೊಡನೆನಾನಾವೃಕ್ಷರಾಜಿಯೊಣಗಿ| ಗಿದುದುಕೆರೆತೊ
ರೆಗಳ್ಕಿಕೊಳ್ಳಕೊಳಬಾವಿಬೆ| ಟ್ಟದಪೊನಲ್ಗಳ್ನದಿನದಾಳಿಜಲರಾಸಿಗೆ
ಳ್ಪುಡಿವಟ್ಟದೇವೇಳ್ವೆನು||೪೦|| ಇಂತುಬರನೆಲ್ಲೆಡೆಯೊಳುಂಪುದಿಯೆ
ಕಂಡುವಿ| ಭ್ರಾಂತರೆಂಬತ್ತೆಂಟುಸಾವಿರಮುನೀಶ್ವರ| ರ್ಕ್ಕಂತುಹರ
ನಿಂಗಾತನಂಪಡೆದವರವರಿದುದಾರುವನದಿಂತಳೆದು|| ತಾಂತಡೆಯು
ದೀತನಾಶ್ರಮಕೆಬರೆಕಂಡುಮುನಿ| ಸಂತಸದೊಳೆನ್ನಪಾಸಂಗಳಿಂಸ
ತ್ಕರಿಸಿ| ತಂತಮ್ಮದೇಶಂಸುಭಿಕ್ಷವಾದಪ್ಪುಸೋಪನೇಳೆಂದುಯೋಚಿ
ಸಿದರು||೪೧|| ಕೇಳಿದಂಶಾಂಡಿಲ್ಯನವರನುಡಿಯಂಮುನಿಗೆ| ಪೇಳದೆಂ
ಪೋಪುದುಚಿತವೆಯನ್ನದಾನದಿಂ| ಮೇಲಾದದಾನಮುಂಟೇಬರ
ದೊಳೆಮ್ಮನೆಲ್ಲರನುರಕ್ಷಿಸಿದನಿನ್ನು|| ಪೇಳಿದಪೆನನ್ನದಾನದಕಥೆಯ

ಗುಣನಿಧಿನೃಪಾಲನೆಂಬಂಬೇಂಟೆಯುಂಪೋಗಿಸಕಲನೃಗಜಾಲಮಂ
ಕೊಲಿಸುತಿರೆಪೊದರಿಂದಮೊಂದುಸಿಗ್ಮಂಪಾರ್ದುದವನಮುಂದೆ ||೪೨||
ಜೆನ್ನಟ್ಟಿದಂಹರಿಯುನತಿಜವದವಾರುವನ ಬೆನ್ನೊಳಿರ್ದವನಿಪತಿಸಿಗ್ಮ
ಮಂಪೊಯ್ವೆನೆಂ|ಬನ್ನವದು ಪೂರ್ವಕಾಪದೆಮಾಯುವಾಗಲರಸಂಮಾ
ಜಿಯಿಂದಿಳಿಯುಲು|| ತನ್ನವ್ವಾಜಿಯುಂಬಯಲಾಗಿ ಪೋಗಲರ | ಸ
ನ್ನೋಡಿನೋಡಿವಿಸ್ಮಿತನಾಗಿಬಳಿಕತನ|ಗನ್ನವಿಲ್ಲದೆಬಳಲಿಕಂಗಡು
ವನೃಪತಿಯುಂಶಬರನೋರ್ವನಂಕಂಡನು||೪೩|| ಬಳಲಿದೈಭೂಪನದೆ
ನಿನಗನಾಂಭುಕ್ತಿಯುಂ|ಸಲಿಸುವೆನೆಸುತ್ತಿಗುಡಿಲಿಂಗೆಕರತಂದುಬಾ|
ರೆಲಗಮುನ್ನಾಂತಂದಬಿದಿರಕ್ಕಿಜೇನುಮಂಭೂಪಂಗೆನೀಡೆನಲ್ಕೆ|| ಬ
ಳಿಕಲಾಶಬರಿಯುಡಿಗೆಯುಮಾಡಿನೀಡಿಮನ| ಮೊಲಿದುಮಂಜಿಗಗಮ
ಲಗಲ್ಕಭೂಪಾಲನಂ| ಕಳುಪಿಕೆಳಗೀರ್ದುದುಮುಪಾಸನೋರಗಿರಲೊಂ
ದುಪ್ಪಿಕೊಂದುತಿಂದುದಮರಂ ||೪೪|| ಬೆಳಗಾದುದನಿತರೊಳಗವ
ನಿಪಂಮಂಚಿಗೆಯು|ನಿಳಿದುಮುಡಿದಿಸವಧೂವರರನೀಕ್ಷಿಸಿಮನದೊ|
ಳಳಲಿಶೇಷಾಂಗಮುಂಸಂಸ್ಕರಿಸಿ ಮರಳೆನೆಲದುದು ಸೇನೆನೃಪನಕೂ
ಡೆ|| ಪೊಳಲಿಗೈತಂದುಮುಜ್ಜವಘೋಜನಂಗಳಿಂ ಬಳೆಕೆಯನಾರಿಸಿನೃ
ಪಂಕೆಲವುಕಾಲಮಂ| ಕಳಿವುತೊಂದಿವಸಮೋಲಗದೊಳುಪುರೋ
ಹಿತಂಗವನೀಕನಿಂತೆಂದನು||೪೫|| ಧರೆಯೊಳ್ಪ್ರಸಿದ್ಧಮಾರೆಂಟುಗಾ
ನಂಗಳೋ|ದಿರುವದರೊಳತಿಮುಖ್ಯದಾನವಾವುದುತನ್ನೊ| ಳೊರ
ದೆನಲ್ಕಂನದಾನವೆನುಬ್ಬುಮುಕೊಂದು ಕಥೆಯುಂಟದಂಪೇಳ್ವೆನು
ಪುರಮುಂಟುಗಂಗಾಪತೀನುಮುಮಿಂಬರೊ, ಳಿರುತಿಪ್ಪನೋರ್ವ
ಪಾರ್ವಂಪ್ರತಿದಿನಂಬಿಡದೆ| ಕರೆದುಂಬನೇಳಿಯೊಳಗನ್ನಂಗಳಿಂದವ
ವಿಪ್ರರಂ ಪೋಷಿಸುವನು||೪೬|| ಬಂದುವಂದೃಷ್ಟಚಂಡಾಲನಾಪಟ್ಟಣಕೆ|
ತಂದುಕಟ್ಟಿಗೆಯುರೊರೆಯುಮೂರುತಿರೆಮುಳಿದೊ|ಳಂದುತೊಪ್ಪನೆ
ತೋದನಂತಭಟ್ಟನಗೃಹಬಹಿರಪ್ರದೇಶಕೆಯೊಳು|| ಇಂಧನದಪ್ರೊ
ರೆಯುನೊರಗಿಸಿಮುಖಶೀತಭಯು| ದಿಂದಪಕ್ಕಿಟಕಿರಿದುಸರಗಳೆಲ್ಲಂ
ನೇದಿ | ನೊಂದುಕಡುಪಸಿವಿನಿಂಪಾಡಳಿದುತದ್ವೇದಿಕಾಗ್ರದೊಳಗಿ
ರುತಿರ್ದನು||೪೭|| ಆಸಮಯದೊಳಗೀಯನಂತಭಟ್ಟಂನಿಜನಿವಾಸ
ದೊಳುಭುಂಜಿಸುವುದಕ್ಕೆಂದಿನಂತೆಪರದೇಸಿಗಳುಪನದವರುವಿದ್ದಪ
ರೊನೋಡಬೇಕೆಂದುಬಾಗಿಲಿಗೆಬಂದು|| ಘಾಸಿಯಾದಂಗಸಂಕೋಚ
ದಪೊಲೆಯುನಂ|ಲೇಸಾಗಿನೋಡಿನೀನಾರೆಂದುಬೆಸಗೊಂಡು|ಭೂಸು
ರೋತ್ತಮನವನೊಳುತ್ತರಂಬಾರದಿರೆಮುಗುಳನೀವಾರೆಂದನು || ಅ

ಸರ್ಗ್ವಪ್ಪನೆಂಬವಿಪ್ರಂತನ್ನ । ಕಾಂತೆವೆರಸಿಯುನಂತೆಸಾಪದಕೆನಮಿಸ
ಲ್ಕೆ। ಸಂತೈಸಿಪೊಲೆಯುಗಿತ್ತನ್ನದಾನವನುದಕದಿಂದೆಧಾರೆಯನೆರ
ದನು ॥೫೫॥ ಪಿಂಗಿತುಪಿಶಾಚತ್ವವಾತಂಗೆನೆರದದೇ । ವಾಂಗನೆಯು
ರೋಳಿಯುಂಮಣಿಮಯವರೂಥದೊಳು। ಪೋಂಗುತಾತಂಪೋದನಾ
ವಿಪ್ರನಂದನಂಜೀವಿಸಿದನೀತನಿಂದಂ॥ ತುಂಗವಿಕ್ರಮಪೇಳಲೇನನ್ನ
ದಾನದು। ತ್ರ್ಯಂಗತೆಯನಿಂತೆನಲುಭೂವರಂಕನಲಿದ್ಯ। ಷ್ಟಂಗಳೆಂತೊ
ಬರಿದೆಗಳೆವಬೇಡೆಂದೆನಲುಭೂಮಿಸುರನಿಂತೆಂದನು॥೫೬॥ ನಾಳೆ
ನಿನಗೀದೃಷ್ಟವಂಸರ್ವಥಾತಂದು। ಪೇಳೆದಿರಿ... ಯುಂಮಾಡೆನಲ್ಬಂ
ದುತಂ। ನಾಲಯುದೊಳೆತುಳಿಚಿಂತಾಭಾರದಿಂಮಲಗಿಸೊಪ್ಪದೊಳೆ
ಗೀಶನೈದಿ॥ಪೇಳಿದಂನಿಮ್ಮರಾಯಂ...ಂಟುದಿನಕೋರ್ವ। ಬಾಲನು
ಗಯುಸುವನವನುಸುರುವನೆಲ್ಲುದಯು । ಕಾಲದೊಳಗೆರವುನೆಗೆ
ಬಂದುಭೂಪಾಲನೊಡನೀವಿಸ್ಯನಿಂತೆಂದನು॥೫೭॥ ಅರಸಕೇಳೆಂದಿ
ಗಂಟೇದಿನಕೆನೋಡುನಿ। ನ್ನರಸಿಯುದರದೊಳೋರ್ವಸುಕುಮಾರ
ಕಂಜನಿಪ। ನೊರೆಗಪಂನಿನಗನ್ನದಾನಫಲಮಂನಿನ್ನಕುವರನೆನೆಭೂ
ಪಾಲನು॥ ರವನೋಲಗೊಲಗುತನ್ನಯುಪಟ್ಟದರಸಿಯೊಳು। ತರುಣ
ನುದಿಸುವದೊಂದುಮೋಣಿಟುದಿನಕೆಂಬು। ದೆರಡಾಗಸಂಶಯಂಪೋ
ಪುದೀಮೂರರಿಂದಂಸ್ಸಂಘಟಿಸಿದನು । ೫೮॥ ನುಡಿದಕಾಲಂಬಂ
ದುದನಿತರೊಳುಬೇಗದಿಂ । ಪಡೆದಳರಸನರಾಣಿನವಮಾಸತುಂಬ
ಲಾ। ಪೊಡವಿಪಂತನ್ನಯುಪ್ರರೋಹತಂಬೆರಸಿನಿಂದಿರೆಕಂಡುಸುಕು
ಮಾರನು॥ನುಡಿವುದೇನೈಯನ್ನದಾನವಂನಿನಗೊಂದು। ಪಡಿಬಿದಿ
ರತಂಡುಲವನಿಕ್ಕಿದವುಸತ್ವಗಿಂ। ಪೊಡವೀಶನಿನ್ನುದರದೊಳುಬಂ
ದೆನಾನೆಂದುತಿಳಿಮನವನಂತಾಳ್ದುದು॥೫೯॥ ಅನ್ನದಾನದಮಹಿ
ಮೆಯುಂತಿನಿತುಮುಂದಿಯುಂ। ಮನ್ನಿಸಿದನೀಗೌತಮುಮ್ಹಾಪಾಕ್ಷೇ
ಮದೊಳ। ಗಿನ್ನರುಪನಾಂಪೋಪೆವೆಂತೆನಲ್ವೇಳಿಪೋಗುವೆವೆನಲ್ಕಲ
ರದರೊಳು॥ಗನ್ನಗತಕದೊಳೊಂದುಗೋವನೊಡವಿಚಿಗೌತ । ಮ
ನ್ನಡೆವಬಳಿಯುಬೆಳೆಯೊಳ್ನಿಲಿಸೆಕಂಡುಮುನಿ। ಪನ್ನವ್ಯಗೋವಿದೆ
ಲ್ಲಿಯುದೆನುತಮ್ಮೈಗಡವೆಬಿದ್ದುಗೋವಸುದೊರೆದುದು ॥೬೦॥ ಬೆಳೆ
ಯುತಿನ್ನದೆಸವಿಾಪದೊಳಿರ್ದಗೋವನಿಂ। ತಳಿದನೀತನವುನೆಯೊ
ಳನ್ನಪಾನವನೆಂತು । ಕೊಳಲಕ್ಕುವೆಂದೆನುತರ್ಲೋಗೆಗೌತಮಂ
ಕಾಲ್ವಿಡಿದುಬೇಡಿಕೊಂಡು॥ ತಿಳುಪಿನಿಷ್ಕೃತಿಯಾವುದಿದಕೆನಲು
ಶಂಕರಂ॥ತಳೆದಮಸ್ತಕದಗಂಗೆಯುತಂದುಗೋವಳಿದ। ಬಳಿಯೊಳೈದಿ

ಸೆಪೊವುದೆನೆಗೌತಮಂ ತಪದೊಳೀಶನಂ ಮೆಚ್ಚಿಸಿದನು ॥೬೧॥ ಮುನಿ
ನಿನಗೆ ಬೆಳ್ಪುದೇನೆನೆ ಮಸ್ತಕದಗಂಗೆ । ಯೆನಗೊಡುವುದೆನೆ ಬಿಂದು
ಮಾತ್ರವಂ ಕೊಡಲಾತ, ನೆನಗೆ ಗೋಹತಿಯಾಕೆ ಬಂದುದೈ ಜಗದೀಶ
ಪೇಳೆನಲು ನೀಂ ಬರದೊಳು ॥ ಮನೆಯೊಳಗೆ ರಕ್ಷಿಸಿದ ಋಷಿಗಳ ಪ
ಕಾರವೆನೆ, ಮುನಿ ಮುನಿದು ಮುನಿಗಳ್ಗೆ ಭಸಿತರುದ್ರಾಕ್ಷೆಯು, ದೃಢಭ
ಕ್ತಿಗಳನುೞಿದು ಪಾಷಂಡಿಮತರಾಗಿ ಕೆಡಲೆಂದು ಶಾಪಿಸಿದನು ॥೬೨॥
ಬೞಿಕ ಮಾಗಂಗೆಯಂ ತಂದು ಪಶುವೞಿದುದ । ಬೞಿಯೊಳೈದಿಸೆ ಗೌತ
ಮಂ ತಂದ ಕಾರಣಂ, ತಳೆದುದದು ಗೌತಮೀನಾಮಮಂ ಗೋಸೋಂ
ಕೆ ಗೋದಾವರೀಯೆನಿಸಿತು ॥ ಎಲೆ ಸಿದ್ಧರಾಮ ಶಂಕರನಿತ್ತ ವಿಷ್ಣುವಂ,
ಬೞಿಗೆ ಕರೆದೆಮ್ಮ ಭಕ್ತನವಾಕ್ಯಮಂ ಪಿಂದು । ಗಳೆಯಬಾರದು ಜೈನ
ಬೌದ್ಧಚಾರ್ವಾಕಾದಿಮತವನೀಂ ಬೆಳಸೆಂದನು ॥೬೩॥ ಲೇಸಾದು
ದೆಂದು ಕಳುಹಿಸಿಕೊಂಡು ವಿಷ್ಣು ಕೈಲಾಸದಿಂ ಧರೆಗಿೞಿದು ಬೌದ್ಧಾವ
ತಾರದಿಂ ಮೋಸಮಂ ಮಾಡಿ ಜಿನಬೌದ್ಧಚಾರ್ವಾಕಾದಿಮತವನುರೆ
ಸಂಸ್ಥಾಪಿಸಿ ॥ ಈ ಸಕಲಮಾನವರೊಳೆಲ್ಲಿಯುಂ ಮಿಗೆ ಕೃತ್ತಿ । ವಾಸನಮ
ಹಾಭಕ್ತಿಯಂ ಮಗಸಿ ಬೞಿಕ ಮಾ । ದೇಶದೊಳು ವೇದಬಾಹರರೆನಿಸಿ
ಪಾಷಂಡಿಮತಮನುರೆ ಪೆರ್ಚಿಸಿದನು ॥೬೪॥ ಹರಿಯು ಕೃತ್ಯವನರಿದ
ರತ್ರಿಮುನಿ ಕಶ್ಯಪಾಂ । ಗಿರಸಕೌಶಿಕಭರದ್ವಾಜಾದಿಮುನಿಗಳೀ ।
ಶ್ವರನಂ ತಪಸ್ಸಿನಿಂ ಮೆಚ್ಚಿಸಲು ಶಂಭು ನಿಮ್ಮಿಷ್ಟಮಂ ಬೇಡಿಯೆನಲು ॥
ಕರುಣಿಸೈ ಮತ್ತ್ಯಲದ ಋಷಿಗಳಜ್ಞಾನಸಂ, ಭರಿತರಾದರ್ ನಿಮ್ಮ ಭಕ್ತಿ
ವೇದಾಗಮಂ, ದೊರಕೊಳ್ಳದವರನುದ್ಧರಿಸೆಂದು ಕೊಂಡಾಡೆ ಲೋಕೇ
ಶನಿಂತೆಂದನು ॥೬೫॥ ಯೋಗಿ ಭಯಬೇಡ ನೀವೆರಡನೆಯ ನಮ್ಮ ರೂ,
ಪಾಗಿ ಸಿರಿಶೈಲಾದ್ರಿಗೈದಿ ಮುನಿಜನಕೆ ಶೈ, ವಾಗಮರಹಸ್ಯಮಂ ತಿಳು
ಪಿಸು ಜ್ಞಾನಮಂ ನೆಲೆಗೊಳಿಪನೆಂದು ಪೇಳ್ದು ॥ ಭೋಗಿಭೂಷಣನವರ
ಕಳುಪಿಸು ಋಷಭಮೂರ್ತಿ, ಯಾಗಿ ಶಿರವೈದು ಭುಜವೆರಡಕ್ಷಿಮೂರ
ರಿಂ, ದಾಗಲಾ ವಿಮಲಶುದ್ಧಸ್ಫಟಿಕವರ್ಣದಿಂ ವೃಷಪತಿಗೆ ಬೋಧಿಸಿದ
ನು ॥೬೬॥ ವೇದವೇದಾಂತಶಿವಶಾಸ್ತ್ರಪೌರಾಣಾಗ, ಮಾಟಗಳನವ
ನಿಯೊಳ್ ಪ್ರಬುದ್ಧಿಸೆನುತ್ತೆ ಶೈ । ಲಾದ್ರಿಗೆಲ್ಲಾರಹಸ್ಯವನರುಪಿ ಶಂಕರಂ
ವೃಷರಾಜನಂ ಕಳುಪಲು ॥ ಮೇದಿನಿಯೊಳಜ್ಞಾನಋಷಿಗಳ್ಗೆ ಶೈವ
ಮಂ, ಬೋಧಿಸಿ ಶಿವಾಚಾರವಲ್ಲದನ್ಯಂಗಳುಮ । ನಾದರಂಗೈವಂತೆ
ಯಾವಿ ವೃಷವಲ್ಲಭಂ ಕೈಲಾಸಮಂ ಪೊಕ್ಕನು ॥೬೭॥ ಇಂತೆಸವ ಚನ್ನ
ಬಸವೇಶ್ವರಪುರಾಣಮಂ । ಸಂತಸದಿ ಬರದವರ್ಗೋದಿದರ್ಗರ್ಥವಾ,

ದ್ಯಂತೆವುಂಬಿಡದೆಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸುಖಮುಂ ಸಕಲಭೋಗಮುನ| ಸಂತಸೌಭಾಗ್ಯಮುಂ ಕೊಟ್ಟು ರಕ್ಷಿಸುವನಾ । ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದಂ ... ... ... ... ||೬೮||

ನಾಲ್ಕನೆಯ ಕಾಂಡದಲ್ಲಿ ೧೨ನೇ ಸಂಧಿ ಮುಗಿದುದು

ಅಂತು ಸಂಧಿ ೫೨ಕ್ಕಂ ಪದ ೨೨೨ಕ್ಕಂ ಮಂಗಳ.

೧೩ನೇ ಸಂಧಿ

ಸೂಚನೆ॥ ಇಂದ್ರಕೀಲದೊಳುಗ್ರ ನಂತಪದೊಳಿರಲರಿದು| ಚಂದ್ರಧರನಾಗಶಾಬರನಾಗಿ ಬಂದಾನ| ರೇಂದ್ರಂಗೆ ಕರುಣದಿಂ ಪಾಶುಪತಬಾಣಮಂ ಕೊಟ್ಟನತಿಸಂತಸದೊಳು॥

ಪದ॥ ಭಕ್ತಜನದೋಷನಿರ್ಮುಕ್ತ ಗುಣಗಣಪಾಂಗ| ಸಿಕ್ತಾನುಕಂಪರಸಯುಕ್ತ ಗಿರಿಜಾಕಲಾಪ| ರಕ್ಷಸತ್ಪ್ರಣವಸಂಪ್ರೋಕ್ತ ವೇದಾಗಮಾಸಕ್ತ ಮುಹಮಾವಲಂಬ॥ ಮುಕ್ತಾಫಳಸ್ಫಟಿಕವ್ಯಕ್ತಾಂಗವಿಶದದಶ| ದಿಕ್ತಟಾವೃತಘನವಿರಕ್ತಸಂಪ್ರೀತಸುತ| ಭುಕ್ತರಣಹಿಮಧಾಮದೃಕ್ತತ್ವರಸಸುಧಾಭುಕ್ತ ವಿರೂಪಾಕ್ಷಶರಣು॥೧॥ ಆಲಿಸಿನ್ನೆಲೆಸಿದ್ಧರಾಮಮುನ್ನೆಂಟುಭೂ| ಪಾಲಕರುಹಿಮಕರಾನ್ವಯಜಾತರೆನಿಸುವವಿ| ಶಾಲಮತಿಧರ್ಮಜಂಭೀಮಂ ಕಿರೀಟಮಾದ್ರೇಯರೆಂಬೈವರಿಂತು ॥ ಪಾಳಿಸೆಧರಿತ್ರಿಯಂದಾಯಾಗ್ರರೊಳ್ದ್ಯೂತ| ಕೇಳಿಸಮನಿಸಿತಮ್ಮದೇಶಕೋಶಂಗಳಂ| ಸೋಲದಿಂದೊಪ್ಪಿಸಿಯರಣ್ಯವಾಸದೊಳಿರ್ದರತುಳಶೋಕಾರ್ತರಾಗಿ ॥೨॥ ಒಂದುದಿನಮಾಭೂಪರಿರ್ದವನಭೂಮಿಗೈ| ತಂದು ವೇದವ್ಯಾಸಮುನಿನುಡಿಗನೆಲಭೂಪ| ಬಂದುದುಮಹಾಪತ್ತು ನಿನಗರಿಪುವೀರರಂ ನೀಂ ಜಯಿಸಬೇಹಾದೊಡೆ॥ ಇಂದುಧರನಲ್ಲಿ ಪಾಶುಪತಾಸ್ತ್ರಮಿರ್ಪುದು । ತಂದುಕೊಂಡೊಡೆ ನಿನಗಮುಲತರಾಯರ್ಗಳಂ| ಕೊಂದುಕೊಡುವುದು ಸಂದೆಗಂಬೇಡವೆನೆಮುನಿಗೆಧರ್ಮಸುತನಿಂತೆಂದನು॥೩॥ ಲೇಸನಾಡಿದೆಮುನೀಶ್ವರಭಗೀರಥಯತ್ನ| ವೈಸಲೇ ನೀಮುಸುರಿದುದು ಶಂಭುವಂ ಕಾಣ| ಲೇಸರವರಾಂ ಕರದೊಡೆಂ ಶರವನಿತ್ತಪನೆಯುತ್ತ್ರೊಡದು ಸಂಹರಿಪುದೆ ॥ ಆಸದಾಶಿವನಮ್ಮೊಳಾಗೆ ಗೋಚರಿಪನೆನೆ| ವ್ಯಾಸಮುನಿಯೆಂದನೆಲೆಭೂಪಪಶುಪತಿಭಕ್ತ ರಾಸೆಯಂ ಸಲಿಸದವನೇ ಕೃಪಾಕರನೀವನಸ್ತ್ರಮಂ ಕೇಳೆಂದನು ॥೪॥ ತಿಳಿಯನಿಮ್ಮೈವರೊಳಗರ್ಜುನಂಗಿಂದುಧರ| ನೊಲಿವನಿಂತೆಂದು ಮಂತ್ರೋಪದೇಶವನಿತ್ತು| ನಲವಿನಿಂ ಮುನಿಪೋದ

ಲೀಲೆಯಿಂ । ಪಿರಿದೆನಿಪಶಾಬರವೆನನುಕರಿಸೆ ತದ್ರೂಪಿನಿಂದೆದೇವಿಯು
ರೆಸೆದರು‖೧೧‖ ತಳಪಸುಲಿಪಲ್ಲಬಂದುಗೆವಾಯನಿರಿಗುರುಳ್, ಪೊಳೆ
ವೆಲಗರ್ಗಂಣತೇಳ್ವಸುರನುಣ್ಡೊಡೆಯುಕೋ| ಮಲತಾಯದಸಿಯನ
ಡುವಿನಮುದ್ದುವೊಗದನಳಿತೋಳೆವೃದುಕರಚರಣದ‖ ಅಲಘುಜ
ಘನದಕುಂಭಕುಚದಗಿಳಿಬುಡಿಯುಸ । ತ್ಕಲಹಂಸಗಮನೆನಡಸುನೀ
ಲಕಾಂತಿಯುಕಂಬು । ಗಳೆಪನಾನಾಶಕ್ತಿಯರ್ಪ್ಪಳಿಂದಿಯರಾಗಿಯು
ಮೆಯೊಡನೆನಡೆತಂದರು‖೧೨‖ ವೇದಂಗಳುಂ ಪುರಾಣಂಗಳುಂ ಶಾಸ್ತ್ರ
ಮುಂ| ಸಾಮರದೊಳುಪನಿಷದ್ವರತಪಸಮಾಧಿಮುಂ| ತಾದಪಾದವು
ಶುನಕನಿಡುಗೋಲ್ಕವಣೆಬುಡ್ಗನುತುಳಿತರಜಾಲಂಗಳು‖ ಆದಿವಿಜಪ
ಮುಧಗಣಮೋಕ್ಷಬರರೂಪಾಗಿ। ಮಾದೇವನಂ ಪೊರ್ದ್ದಿದುದು ಸಕಲಭು
ವನಪನ| ಮೀದಯಾಂಬುಧಿಯಲೀಲಾವಿನೋದಮನೀಕ್ಷಿಪುತ್ಸಕದೊ
ಳೈತಂದುದು‖೧೩‖ ತೆರಳಿದಂ ಸರನಿಂದ್ರಕೀಲಪರ್ವತಕಾಗಿ| ಮೊರೆ
ವಮಾರ್ಗದಮುಹಾರಭಸದಿಂ ಬರಬರ| ಲ್ಕುರಗಭೂಷಣಮಾಗಿಹರನಂ
ತೆಪಂಚಾಸ್ಯಯುಕ್ತಮಿನೃಸಿಂಹನಂತೆ‖ ಹರಿವಿಲಾಸದಿನಂಬುನಿಧಿಯುಂ
ತೆಸಂತತಂ| ವರಪುಂಡರೀಕವಿಲಸಿತಮಾಗಿಕೊಳೆನಂತೆ| ಪರಿಶೋಭಿ
ಸಿತ್ತುಕಾಂತಾರಂ ಮಹಾತಿಮಿರಘೋರಮಹಾಹರನಿಬರೊಳು ‖೧೪‖
ನಾಗಪೂರಂಗಳಿಂ ಮಾಜರಾಜಿಗಳೊಳುಂ| ಬಾಗಿದಸ್ಯಂದನೋದ್ರುಮ
ಗಳಿಂದೆಸೆಮಪ| ದ್ಗೀಗಣದನವಗಡಿಪಬಲ್ಗಿಕಿಕುರುಂಬದಿಂ ಕದಳಿಗಳೆಗ
ಡಣದಿಂದಂ‖ ಮೇಗಸೆವಘಸ್ವೀಕದಂಬಕಡಗಗಯ್ಯ| ಮಾಗೇಳ್ವಪುಂ
ಡರೀಕಾಳಿಯಿಂ ಶರಕುಲದೊಳ್ಗಿರೀಂದ್ರನಮಹಾಸ್ಯೈಸ್ವಮೆನೆಬಳೆ
ಸಿದರ್ಕಾನನಂ ಕಂಗಸದುದು ‖೧೫‖ ಅವ್ಯತ್ರೈಯುಮ್ಮಹಾವಜ್ರ
ಗೇಹನ್ನಾಡೆ| ಯಮರೀನಿವಾಸಮುಂ ಸರಿಚಂದನಾಲಯುಂ| ಸುಮ
ನೋಹರಂ ನೆಗಳ್ದಿಂದ್ರಾಣೆಸದ್ಮಮದರಿದೆ ಭೂಮಿಸಗ್ಗಮೆನಿಸಿ‖ ಅಮಿ
ತಶಿವಗಣಶರಣಸ್ರೀಶ್ವರಯುಬೀಡುಸಂ । ಭ್ರಮಿತಗಜಮುಖಪಾಸ
ಮಾಶರಭನಿಳಯುವಿ| ಕ್ರಮಯುತಂ ನಂಬೀಭೃಂಗೀವಿನೋದದೊಳೆ
ಕೈಲಾಸಮೆನೆವನಮೆಸೆದುದು ‖೧೬‖ ಆಲಮಾಬಸುರಿಬಂಡಲತಂಡ
ಕಂನೆಲ್ಲಿ| ಜಾಲಮಾಹೊನ್ನರಳಿಯುತಿರಾಯುನೆಲ್ಲಿಯಾ । ಚೇಲಮರೆ
ನೇರಿಲಾಮ್ರಂಹುಣಸೆತಡಕುತೂಬರಬೆಳ್ಬಲ್ಲವತ್ತು‖ ಪಾಲಾಶಮ
ರುಟುಳಿಮಾತಡಸುಕಕ್ಕೆಯುಂ । ಕೋಲತಗಿಯುಂ ಹಲಸುಹೇಸು
ವುಂಬಲ್ಬದರಿ । ಸಾಲಮಾಹೊನ್ನೆಚನ್ನಂಗಿಮೊದಲಾದವೃಕ್ಷಂಗಳಿಂ
ವನಮೆಸೆದುದು‖೧೭‖ ಕರಿಯಂತೆ ಕೊಳದಂತೆ ಹರಿಯಂತೆ ಪುರದಂತೆ|

ಸರಸಿರುಹಭವನಂತೆ ಸುರಕುಲೇಶ್ವರನಂತೆ। ಪರಮಪುಷ್ಕರಪುಂಡ
ರೀಕಶಿಖಿಕನ್ಯಕಾಗೋವಜ್ರಯುಕ್ತವಾಗಿ॥ ಹರನಂತೆ ಮುಖದಂತೆ ಗು
ಹನಂತೆ ರಣದಂತೆ। ಗಿರಿಜಾತೆಯಂತೆ ಮಿಗೆ ಹಂಸಸದ್ವಿಜಕೇಕಿ। ಶರಸಿ
ಹ್ಮಯುತವಾಗಿ ಕಾನನಂ ಬಹಳರೌದ್ರಾನನಂ ಕಂಗೆಸೆದುದು ॥೧೮॥
ತರಣಿಕಿರಣಾಭೇದ್ಯಕುಜಮುಮಂ ಗಜಮುಮಂ। ಪರಿವಿಡಿಯೊಳೆಸೆ
ವ ಕೇಸರಿಮುಮಂ ಹರಿಮುಮಂ। ಪರಿಪೂರ್ಣವಾರಿಹಾಸರಮುಮಂ
ಶರಮುಮಂ ನಾನಾತೃಣಾವಳಿಮುಮಂ॥ ಧರಣಿತಳಮಿಳಿತಕಂಟಕ
ಮುಮಂ ಶುಕಮುಮಂ। ಪರಿಪರಿಯ ನೆರದ ಸನ್ಮೃಗಮುಮಂ ಖಗಮು
ಮಂ ಗಿರಿಯಿಂದೆ ಸೋರ್ವ ನಿರ್ಝರಮುಮಂ ಸರಮುಮಂ ತಾನೆನಿಸಿ
ವನಮೆಸೆದುದು॥೧೯॥ ಸರಳ್ಗಳ ತಿದ್ದಿ ಗರಿಗಟ್ಟುತಂ ಬಿಲ್ಗಳಂ ಹೆರೆದು
ಹೆದೆಯಂ ಹೂಡುತಂ ಕಲ್ಲಿಬಲೆಗಳಂ ಸರಗೊಳಿಸುತಂ ಪಾಸುಮಂ ಹಾ
ಸುಗೈವುತಂ ನಾಯ್ಗಳಂ ಮೈದಡವುತಂ॥ ಘೋರಮಧೀಹದ ಮಿಗಂಗಳೆ
ಮೋಹಂ ನೀಡಿ। ಕರೆದು ಬೇಂಟೆಗಳನುರೆ ಕಲಿಸುತಂ ತಂತಮ್ಮ। ಪರಿ
ವಿಡಿಯ ಜಾತಿವಿದ್ಯಂಗಳಿಂದೆಸೆವ ಲುಬ್ಧಸಯದೆ ವನಮೆಸೆದುದು॥೨೦
ತಲೆನವಿರುರ್ಗಂ ಜುಳ್ಳಿಗಡ್ಡಕೆ ಮಿಶ್ರಸೆಕೆ। ಗಳಪಸುರ್ತಿವಣೆವಲ್ತ್ರಗಳೆ
ಕಾಂರೊಡಲಜೋಲು। ತಿಳಿವ ಬಸುರಿನ ಕೂನ ಬೆನ್ನ ಕುಗ್ಗಿದ ಕೊಲಬೇ
ಟಗಾಲ್ಸ್ರಗ್ಗನಡೆಯಾ॥ ಬಲೆಕಲ್ಲಿಗಳ ಹೊತ್ತ ಹೆಗಲ ವಡುಪಿಗಪಿಡಿಗ। ಬ
ಲೆಕೋಲಕುಕ್ಕರಂಗಳ ಗಿಡುಗಗಳ ಕೈಯ್ಯೊಳ್ಯ। ಳಳವಟ್ಟುಗಡುಗಳೆಸೆ
ಯಲ್ಕೆ ವನಚರರಿಂದೆ ವನಮೆಸೆದುದೇನೆಂಬೆನು॥೨೧॥ ವನಗಜದ ಮು
ಕ್ತಿಕದ ತೊಡಗಳಂ ತೊಟ್ಟು ಮಾ। ವಿನತಳಿರನುಟ್ಟು ದಂತದ ಬಲೆಯನಿ
ಟ್ಟು ಪೂ। ವಿನಪಟ್ಟಗಳೊಳಲಂಕರಿಸಿ ಪೊಸದಂತದೋಲೆಗಳ ಕಿವಿಗಳೊ
ಳಮರ್ಚಿ॥ ವಿನುತಚಂದನದ ಮುರದೊಳ್ಗಳಿಂ ಬಿದಿರಕ್ಕಿ। ಯೆನೆಪೊ
ಯ್ದುಉನ್ನತದ ದಂತಿದಂತಂಗಳೊಳು। ವನಕೆಯಂ ಪಿಡಿದು ತಳಿಸುತೆ
ಪಾಡುತಿರ್ದ ವನಚರಿಯರಿಂ ವನಮೆಸೆದುದು ॥೨೨॥ ಪರಿವಿಡಿಯೊ
ಳಿಂತೆಸೆವ ವನಮನುರೆ ಪೊಕ್ಕು ದಂ। ದಿರದೆ ಬೆಳ್ಳಾರವಲೆ ತಡಿಕೆವಲೆ ಸಿದಿ
ವಲೆಯ। ಕರದೊಳಾಂತಾಗಳಾ ಹರಗಣಂ ಸುರಗಣಂ ಶಾಬರಗಣಂಗಳಂ
ತೆ॥ ಕರಿಸಿಂಹಶರಭಶಾರ್ದೂಲಭೇರುಂಡಾದಿ। ಪರಿಪರಿಯೊಳೊಪ್ಪುವ
ಮೃಗಂಗಳಂ ಪಾರಿವಂ। ಪುರುಳಿ ಲಾವುಗೆ ಗುಬ್ಬಿ ಮುಂತಾದ ಖಗಕುಲ
ಮನರಸುತ್ತೈತರುತಿರ್ದರು॥೨೩॥ ಇದೆ ಪಾವಗಡಿದು ಸಾರಂಗಮೈದಿ
ದ ತಾಣ। ಪಿದೆ ಕೊಸಾರಂಗಮಂ ಪುಲಿಕೊಂದು ತಾಣವಿ। ಲ್ಲಿದೆ ಪುಲಿಯ
ನ್ನೊಡೆಬಡಿದು ಕರಿಪೋದ ತಾಣವಿದೆ ಕರಿಯ ಹರಿಸೀಳ್ದ ಠಾವು॥ ಇದೆ ಹ

ರಿಯಂ ಶರಭನುರೆ ಚಂಚುವಿಂ ಸೀಳ್ದ ಬಳಿಯಿಂದೆ ಶರಭನಂ ಸಮರಿ ಭೇರುಂ-
ಡನಡಿಯಿಟ್ಟು। ಪದದ ಕುರುಪೆಂದು ತಮತಮಗೆ ಸನ್ನೆಗಳಿಂದೆ ಶಬರರ-
ರಸುತ್ತಿರ್ದರು ॥೨೪॥ ಕಡೆಪುಸಾರಂಗಮಂ ಸಿಂಗಮಂ ಪೊಯ್ಯುತ್ತಲೆಯ್ದೆ।
ನೊಡೆ ಗಜದ ಪುಲಿಯನೆಬ್ಬಟ್ಟುತಂದಿಯನಿಟ್ಟು। ಮಡಿಸು ಖಡ್ಗಿಯ ಖ-
ಡ್ಗದಿಂದೆ ಮರ್ಗಸು ಮರೆಯ ಪೊರೆಯ ಮರೆಯಂ ತುಡುಂಕು॥ ಕಡಿನ-
ರಿಯ ನಿರಿಸಲಿಯ ನಿಡುಮೊಲನನುಡುಗಳಂ। ಬಡಿಚಮರಿವಾಲಮಂ
ಪಿಡಿತಡೆಯದಡಿಯಡೆಂ। ದೊಡನೊಡನೆ ಘಾಡು ಘಾಡಿಸಿ ಝಡಿತೆ
ಯಿಂದುರುಬಿದಗ್ಬಡದೆ ನಾಯಾಕ ಶಬರರು ॥೨೫॥ ಉದ್ದುರುಟುತನದಿಂ
ಪಬಲೆಯೊಳಗೆ ಬಿದ್ದುಬಿ। ದ್ದೊದ್ದುಕೊಂಡವು ಕೆಲವು ಶಿವಭಟಕಗಾವ
ಳಿಗೆ। ಮುಂದಾಡಿಸುವ ಮರಿಗಳಂ ಬಿಟ್ಟು ಕೆಟ್ಟೋಡಿದವು ಕೆಲವು ಕಂಡೆ
ಕಡೆಗೆ॥ ಉಗ್ಗಳಿತ ಬಾಣಪಿಂತಂ ತಮ್ಮ ಸರಣಮಂ। ತ್ರಿಸ್ಟದವು ಕೆಲವಿಂ
ತು ಮಾಯಾಪುಳಿಂದ ತತಿ। ಮುದ್ದರದು ಪಿಳಿ ಮೃಗಸಂತತಿಗೆ ಪೇಳಲೇ-
ನದುಭ್ರುತವನಾವಡದೊಳು ॥೨೬॥ ಗಜಪೊಂದು ಪೊಗುತ್ತಿರೆ ಸಿಂಹ-
ಮೈತಂದು ತ। ದ್ಗಜಕುಂಭಮಂ ಸೀಳುತಿರೆ ಶರಭನಾರ್ಭಟಿಸಿ। ಗಜಮೆ-
ರಡುಮಂ ಪಿಡಿಯಲಾ ಭೇರುಂಡನಾಗ ತುಂಡಗಳಿಂದ॥ ಗಜಸಿಂಹಶರ-
ಭಂಗಳಂ ಕಚ್ಚಿಪಾರುತಿರೆ। ಗಜಸಿಂಹಶರಭಭೇರುಂಡಂಗಳಂ ಕಂಡು। ತ್ರಿಜ-
ಗದೋಳ್ ಪೊಗದ್ಯಾಮ ನಲಿಚಚ್ಚು ಕಡುಪಿದನವಂ ಮಾಯಾಪುಳಿಂದ ನೋ-
ಡ್ವಂ॥೨೭॥ ತಟಿಕೆಯಂ ಪಿಡಿದೊರ್ವ ಮಾಯಾಪುಳಿಂದನಡಿ। ಯಿಡು-
ವುದಂ ಕಂಡೊಂದು ಪಕ್ಷಿ ತನ್ನೆದೆಯೊಳಗೆ॥ ನಡುಗಿ ಶಿವಶಿವ ಕಂಡೆಷ್ಚರಿ
ಯನೆತ್ತಲಾನುಂ ಚೇತನಂ ಬಡೆಯದ॥ ಗಿಡುವುಡುವು ಬಂಟೆ ಬರುತ್ತಿದೆ
ಬಳಿಗೆಯ ಕಟದೆಂ। ಕಡೆಗಾಲ ಮೋತಮಗೆ ಯಾದೊಡಂ ವಿಪರೀತ। ದೆ-
ಡೆನೊಳಿರಬಾರದೆಂದೋಡು ತಾಮೃಗಮಿರದೆ ನಗಿಸಿದುದು ಗಣಕುಲ-
ವನು ॥೨೮॥ ಹುಲಿ ಹುಸ್ತಿಮರಿಗಳುಂ ಕೇಸರಿಯು ಸೈರಿಭಂ। ಮೊಲನ್ಯೈ
ಯ ಮೃಗಮಾನಿಸಾರಂಗನೃಕ ಕರಡಿಗಳು ಬೆಕ್ಕು ಹಂದಿಮುಂಗುಲಿಜಂ-
ಬುಕಂ ಗೋಧಿ ಕಾತ್ರ ಜಂಮುರೆಮೂಷಕ ॥ ಸಲೆ ಶರಭ ಭೇರುಂಡ ಚ-
ಮರೀಮೃಕಂಗಳುಂ। ಚಕ್ರಪಕ ತ್ತುರಿಯ ಮೃಗಮುಂ ಜವಾದಿಯ ಬೆ-
ಕ್ಕುಗಳನಿರದೆ ಪಿಡಿದು ಜಡಿದಗ್ಬಡಿದಲ್ಲಲ್ಲಿ ಮಾಯಾಪುಳಿಂದರಂದು॥
ನೋಗೆ ಹದ್ದು ರಸಂಚೆ ಕೊಂಬ ಕಂಟಿಟ್ಟಬಂ। ಕೋಗಿಲರಗಿಳಿ ಪಾರಿವಂ-
ಲಾವಕಂ ಗುಬ್ಬಿ। ಗೂಗಜಾದಗೆ ಹರದೆ ಹಂಗಂ ಚಕೋರಿ ತಿತ್ತಿರಿ ಸಾಳೆ-
ವಂಗರು ತ್ಮಾರ್ಕ॥ ಕಾಗೆ ಹೊಂಗಾಗೆ ಚರಣಾಯುಧಂ ಚಾಳಾಂಕಿ। ಯಾ-
ಗೌಜುಕಂ ಕಂಥರ ದ್ವಾಜ ಮೇಬಾವಾ। ಬಗೆಬಗೆಯ ಪಕ್ಷಿಗಳ ತಂಡ

ಮಂಬಡಿದರಾ ಮಾಯಾಪುಳಿಂದರಂದು ॥೨೦॥ ಮೃಗಮನುರೆಪಿಡಿ
ರಾಹರನಂತೆ ಹರಿಯಂತೆ । ಮಿಗೆಶಿಖಿಯುಸಾಂತರಾಧ್ವಜನಂತೆ ಹ
ಯಂತೆ । ಮುಗುಳೆಫರಪುಂಡರೀಕಮನರಸಿದ ತುಂಬಿಯಂತೆ ಹ
ಯಂತೆ ಬಳಿಕ॥ ಸಿಗಿದರುರು ನಾಗಮಂ ರವಿಲಂತೆ ಹರಿಯಂತೆ। ಸೊಗಸ
ದರುಡುಗಳಿಂ ನಭದಂತೆ ಹರಿಯಂತೆ । ಬಿಗಿದರ್ಬುಗಾಳಿಯುಂ ಭಟರಂತೆ
ಹರಿಯಂತೆ ಮಾಯಾಪುಳಿಂದರಂದು ॥೨೧॥ ಉರಗನಂ ಕೊಂದು ತಲೆ
ಣೆಗಳಂ ಗಿಣಗಳಂ। ಪರಿದು ಸ್ತೊಳೆ ಮೆಳೆಯ ಸಾರಂಗಮಂ ಸಿಂಗಮಂ। ಕರಿ
ರದಮುತ್ತಿಕದಜಾಲಮಂ ವಾಲಮಂ ನೆಗಳೊ ಚಮರೀನಿವಹದ ॥
ರದೆಪಾರುವ ನವಿಲಮುರಿಗಳಂ ಗರಿಗಳಂ । ಪರಿಪರಿಯ ಪಕ್ಷಿಗಳ ಗು
ಗಳಂ ತರಿಗಳಂ । ಬರಿಸುಲಿದ ಪುಲಿಯ ಚರ್ಮಂಗಳಂ ಪಂಗಳಂ ಪಿಡಿದು
ಬರರು ನಡೆದರು ॥ ೨೨ ॥ ಇಂತು ಪಲತೆರದ ಬೇಂಟೆಯು ನಾಡು ತಾ
ಗಳೆ । ತ್ಯಂತ ಪರುಷದೊಳಿರ್ದಿಳೆ ಮಾಯಾಪುಳಿಂದರಾ । ಕಾಂತಾ
ದೊಳು ಬರುತ್ತಿರಲವರಗಾವಳಿಗೆ ತದ್ಗಿರಿಗುಹಾಂತರದೊಳು ॥ ಚಿಂತೆ
ಯಿಲ್ಲದೆ ಜಗತ್ಪ್ರಳಯ ಸಮಯದ ಮಹೋ । ಗ್ರಾಂತಕನ ರೂಪಿನಿಂ
ಮೂಕದಾನವನೆಂಬ। ನಂತರಿಸದತಿಭೀಕರಾಕಾರ ಸೂಕರಂತಾ ನಾ
ಗಿ ಪೊರಮಟ್ಟನು ॥೨೩॥ ಜಡಜಡಂ ಸಿಡಿಲಪಡೆಯಂ ಪಿಡಿದು ಸೂಕರ
ನ್ತ। ಕುಡಿದಾಡೆಯಂ ಸಮುದನೋ ತಟಜ್ವಾಲೆಯಿಂ। ದೊಡರಿಚ
ದನೋಕಣ್ಗಳಂ ರೋಮನಿಚಯಮಂ ಲೋಹದಶಲಾಕೆಯಂತೆ॥ ನಿ
ಡಿದು ಗೈದನೊಕಠಿಣಮಾನಪೇರ್ಗ್ವಂಡಿನಿಂ। ಕಡೆದು ಕಂಡಿರಿಸಿದನೊ
ತನುವನ ಕಟಿನು ತಾಗ। ವೃಡಸೇನೆಯ ಭಟರು ನಡನಡುಗಲಾ ಪ
ದಿತುಡುಕಿದುದು ಸುರಭಟರನು ॥ ೨೪॥ ಕೀರುತೆ ದಬಲಕೆಮುರಿಮು
ರಿವಮುರಿನಾಯ್ಗಳಂ। ಕೋರೆಯಿಂ ದೆರಗಿ ಖಂಡಿಸುತೆ ತರುಬಿದಭಟ।
ರ್ಗೀರುಗಾಣಿಸುತಾಂತ ಬಲೆಗಳಂ ಸವರುತ ಸರೋಷಮನನಾಗಿ ಕೂ
ಡೆ॥ ಚೀರುತ್ತೆ ಸಮ್ಮುಖದೊಳಾಂತ ತರುಲತೆಗಳಂ। ಪಾರಿಸುತ ಬೇಗ
ಗಣಪಾಲರಂ ಶಂಭುವಿಗೆ । ದೂರಿಸುತ ಭೀಕರಾಕಾರನೈದಿದುದಾ
ಕೋಡನಾವನದೆಡೆಯೊಳು ॥ ೨೫॥ ಎಲ್ಲಿ ತಾಗಿತು ಘಾಯಮಲ್ಲಿ ರುಧಿ
ದತೋಯ। ಮೆಲ್ಲಿಯುರುಬಿನಬೊಬ್ಬೆಯಲ್ಲಿ ಸುರಗಣದುಬ್ಬೆ। ಯ
ಖುರಚಯಪಾತಮಲ್ಲಿ ಮಾಂಸ ಪಾತಮೆಲ್ಲಿ ಸುಳಿವಲ್ಲಿ ಯುಳಿವು॥ ಎ
ವೃದೊಲದಾಟಮಲ್ಲಿಯು ಕುಜೋತ್ಪಾಟ। ಮೆಲ್ಲಿ ಪದಸಂಘಟನಮ
ಲ್ಲಿ ಧರಣೀನಟನ । ಮೆಲ್ಲಿಯುನ್ಮುಖಭಾವಮಲ್ಲಿ ದಿವಿಜರ್ಗೆ ಹೇವಮಾ
ಶ್ರೀಧಿಯಿಂದಾದುದು॥ ೨೬ ॥ ಮೂಕದಾನವನತಿಭಯಂಕರದೊಳ

ಪರಿಧಿ। ಪಾಕಸುರಸೇನೆಯುಂ ಸದವುದಂ ಕಂಡಿಂತು। ಸೋಂಕದುಳಿದರೊ
ಳೆಂದು ಚಾಪಮಂ ಜೇಗೈದು ಶರನೆಚ್ಚು ಬೊಬ್ಬಿಡಲ್ಕೆ ॥ ಆಕುಮಾತಿ
ಯುಂ ತಾಗೆ ಪೊತ್ತಂಬು ಸರಿತ್ತೆ ಬಂ। ದೀ ಕಿರೀಟಿಯುಮುಂದೆ ಘುಡುಘು
ಡಿಸಲಾಕ್ಷಣಂ। ಲೋಕನಾಥಧ್ಯಾನಮುಳಿಯೆ ಕಂಡಾ ವೈರಿಭೀಕರಂ
ಸೂಕರನನು ॥೩೭॥ ಸೊಕ್ಕಿದೆಕ್ಕಲನೊಕ್ಕಲಿಕ್ಕುತ ವನದ್ರುಮವ। ನಿ
ಕ್ಕಯುಂ ಬಿಟ್ಟೆತ್ತ ಪೋದಪುದೊ ಪೊಕ್ಕನೋ। ಟಕ್ಕಸೋಜಿಗವಾಗೆರ
ಕ್ಕಸರಪೆಗೆ ಬಲ್ಲನಕ್ಕನುತ ಬಾಣದಿಂದಂ॥ ಇಕ್ಕಲಾ ಸೂಕರಂ ಕಕ್ಕಸದ
ಬಾಣದಿಂ। ದೊಕ್ಕಗೊಡಲಂ ನೆಲಕೆ ಪಕ್ಕಸಸುವಂ ಬಿಡೆ। ಬಿಕ್ಕಿದುದು
ಕಿಟಿಯೆನುತ ಮುಕ್ಕಣ್ಣ ಪಟ್ಟಿದವನೆಕ್ಕತುಳಬಂ ಪಿಡಿದನು ॥೩೮॥ ಮಂ
ದಿವಾಳಿಪನಮ್ಮ ಕೂಡಲೆ ಪುಳಿಂದನಾಂ। ಕೊಂದ ಪಂದಿಯುನೊಯ್ದ
ಪೈ ನಿನ್ನ ತೆತ್ತಿಗನ। ತಂದು ತೋರಾತನೇತರ ಸಮರ್ಥಂ ಕಾಣ್ಬೆ ಸಂ
ದರ್ಜುನನಂ ನುಡಿಯಲು॥ ಇಂದುಧರನವನೆಂದ ನುಡಿಯನಾಲಿಸಿ ನಲಿ
ವಿ ನಿಂದ ಬಂದಂ ನರನ ಸ್ಪೂರೆಗಲಿ ತಪಸ್ವಿ ದೇ। ನೆಂದು ನುಡಿದೈ ಪಂದಿನ
ಮ್ಮದೆನೆ ಘುಡುಘುಡಿಸಿ ಕಪಿಪಾರ್ಥನಿಂತೆಂದನು ॥೩೯॥ ಸಾಕೆಲೆಕಿ
ರಾತ ನಿನ್ನಯ ಬಲ್ಮೆಯೆ ಪೊಮ್ಮಡನೆ। ನೂಂಕುವುದೆ ನಮ್ಮಂಬಿನಿಂದ ಬಿ
ರ್ದ್ದುದು ಪಂದಿ ಜೋಕೆ ಮಿಗ ತೆರಳ್ಗದೊಡೆ ಕೊಳ್ಳರಾಳಿಯುಂ ನೀನೆನು
ತೆ ಪಾರ್ಥನೆಸೆಯೆ॥ ಈ ಕಿರೀಟಿಯ ಬಾಣಸಂಕುಲಂ ಶಂಭುವಂ। ಸೋ
ಕದುರಿ ಬಲವಂದದಂ ಕಂಡು ಕೋಪದಿಂ। ಭೀಕರದ ಬಾಣಂಗಳಂ ಪೂಡಿ
ದಂ ಪಾರ್ಥನೇನೆಂಬೆನಚ್ಚರಿಯನು॥೪೦॥ ಅಚ್ಚರಿಸಿ ಪಾರ್ಥನೆಸೆ ಬಾಣಂ
ಗಳ ಭವನಂ। ನಿಬ್ಬರದೊಳೈದಿಸಸು ಸೋಂಕಿ ಸೋಂಕದೆ ಮುರಳೆ। ಉ
ಚ್ಚಿಗದೊಳರ್ಜುನಂ ಮತ್ತೆ ಮತ್ತೊಡನೊಡನೆ ಮುರಳಿ ಮುರಳಿಷುಗಳಿಂ
ದಂ॥ ಕೊಬ್ಬಿದ ಕಿರಾತನೀಂ ಜೀಳ್ದನುತೆ ಮುಸುಕೆ ಸರ। ಳುಬ್ಬಿದವು ದೆ
ಸೆಯೆತ್ತ ಶರನೆತ್ತ ನರನೆತ್ತ। ಸಬ್ಬತ ಸುಗಿರಿಸ ತಾಳಿಗಳೆತ್ತ ಮಗುಳೆತ್ತ
ನಭಮೆ ಸಲ್ಪಸರಿಸಿದವು ॥೪೧॥ ಕಂಡು ಬಗ್ಗಮನುಗಿದು ದಕ್ಷಾರಿ ಚಾಪ
ಮಂ। ಕೊಂಡು ಗುಹನುಗ್ರ ಪಟಳುವನೆತ್ತ ಗಡಮುಖಂ। ಹಿಂಡು ಹಿಂಡಾ
ದಗಡಜಾಲವಾಯುಧವೆರಸಿ ತಾಪಸನ ಜೀವನವನು ॥ ಹಿಂಡುವವೆ
ನುತ್ತೈದೆ ಕಣ್ಬನ್ನೆಯುನ್ನಿಳಿಸಿ। ಚಂಡವಿಕ್ರಮ ನರನ ಬಾಣಂಗಳನಿ
ತುಮಂ। ಖಂಡಿಸುತ ಮುರಳೆ ತಮ್ಮಡಿ ಸಾಕು ಹೋಗೆನಲ್ಕರ್ಜುನಂ
ಖತಿಗೊಂಡನು ॥೪೨॥ ಬಾಣಮಂ ಕಡಿದುರುಳ್ಚುವನಿವನದೇಂ ಪಂಚ
ಬಾಣಹರನೋ ಗುಹನೊ ರಾಮನೊ ರಾಮನೊ। ದ್ರೋಣನೋ ಭೀ
ಷ್ಮನೊ ಕರ್ಣನೊ ಬಿಲ್ಬಲ್ಮೆಯಾವವಂಗಿನಿತಪ್ಪುದು ॥ ಕೇಣವೇಕೆ

ದಕೆಭಲರೇಪ್ರಳಿಂದಂಗೆಸರಿ, ಗಾಣೆನೆಂದೆನುತೆಬತ್ತಳಿಕೆಯಿಂದರ್ಜು
ನಂ । ಸಾಣೆಯುಲಗಿನಸರಿಯುನುರೆಕರೆಯೆಕರೆಗೊರಲನನಿತುಮಂ
ಖಂಡಿಸಿದನು ॥೪೩॥ ಮತ್ತೆ ಪೊಸಬಾಣಮಂ ಪೂಡುವಂ ನೋಡುವಂ।
ಚಿತ್ತಜಾರಾತಿಯುಂ ಖಾತಿಯಂ ತಾಳಿಪೋ। ಗತ್ತಲೆನುತೆಚ್ಚು ಮೂ
ದಲಿಸುವಂ ನಿಲಿಸುವಂ ಬಾಣದದಟಿಂ ರುದ್ರನು ॥ ಚಿತ್ತಕಾಶ್ಚರ್ಯಮಂ
ಮಾಡುವಂ ಕಾಡುವಂ। ಪೊತ್ತ ಪರಿಭವಕೆ ನರನಾಕ್ಷಣಂ ತೀಕ್ಷ್ಣಂ, ಚಿ
ತ್ತಂಬನೊಡನೆಚ್ಚು ಬೀಗುವಂ ತೂಗುವಂ ಬಿಂದವಂ ಶರಿನರಿವನು ॥೪೪॥
ಶ್ವೇತವಾಹನನಾಗಳೆಸುವನಾ ಬಾಣಮಂ। ಭೂತನಾಥಂ ಕಡಿವನೊ
ಡನೆಸುವನಾ ಪಾರ್ಥ । ನೀತನರಿವಂ ಮತ್ತೆ ಕವಿಸುವಂ ಪಾರ್ಥನವ
ನುಂ ಕಡಿವನಿಂದುಧರನು ॥ ಈತೆರದೊಳೆಚ್ಚೆಚ್ಚ ಬಾಣಮಂ ಕಡಿಯೆ
ಸ । ತಾಪಾತಿಶಯದಿಂದೆ ಮಂತ್ರಾಸ್ತ್ರಗಳಂ ಪ್ರಮಡಿ । ಖಾತಿಯಿಂದಾ
ರ್ದೆಸೆಯಲನಿತುಮಂತ್ರಾಸ್ತ್ರಮಂ ನುಂಗಿದಂ ಹರನಾಗಳು ॥೪೫॥ ಗಿರಿ
ಯಬಳಗಂ ಮುಸುಕೆ ವಜ್ರಮುಳ್ಕುವದೆವನ। ಕರಿಯ ಬಳಗಂ ಮುಸು
ಕೆ ಸಿಂಹವೇನಂಜುವುದೆ । ಹರಿಯ ಬಳಗಂ ತೊಡರೆ ಗರುಡನಿಂದೋ
ಡುವನೆ ಕೇಳಿದೈ ಸಿದ್ಧರಾಮ ॥ ನರನ ಸಮಂತ್ರಾಸ್ತ್ರಂಗಳಾಕ್ಷಣಂ ಪರಿಪ
ರಿದು। ಹರನನಂಡಲೆಯಲಾರ್ಪವೆ ನಿಮಿಷದೊಳಗುಮಾ। ವರನವಂ
ಪರಿಹರಿಸೆ ಮುಗುಳೆ ದಿವ್ಯಾಸ್ತ್ರಮಂ ತೊಟ್ಟೆಚ್ಚು ಬೊಬ್ಬಿರಿದನು ॥೪೬॥
ನರನೆಚ್ಚ ಬಾಣಮಂ ನುಂಗುವಂ ಪೊಂಗುವಂ। ಕರಳಿ ಮೂದಲೆಮಾತನಾ
ಡುವಂ ನೋಡುವಂ । ತಿರಿತಿರಿಗಿ ಪಾರ್ವತಿಗೆ ಸೂಚಿಪಂ ನಾಚಿಪಂ ಹಾ
ಸ್ಯೋಕ್ತಿಯಿನ್ನರನನು ॥ ಮರುಳೆ ತಮ್ಮಡಿಶೂಲಿಯರ್ ಮುಗ್ಗಿತೇ ತಗ್ಗಿತೆ।
ಶರಳುಗಳು ತೀರಿ ಬಯಲಾದವೇ ಪೋದವೇ। ಧುರಕೆ ಮಗಸರಿಯೆ ಪೃ
ಥೀರನೆ ವೀರನೆ ನೀನೆನುತೆ ಹರನೆಂದನು ॥೪೭॥ ಕಾಡಬೇಡಂ ಹೀನಕು
ಲದವಂ ನಿನ್ನಂತೆ। ಬೇಡನಲ್ಲಂ ಕ್ಷತ್ರಿಯಂ ವೀರರೆನಲವು। ಬೇಡರಿಂ
ಬುದೆಧಿಟಂ ಮೂಲೋಕವರಿಯನೆಂ ಬೇಡಿತಪವಂ ಮಾಡುತ ॥ ಬೇಡ
ನಲ್ಲೆನಗರೆಮುಳಿ ತಾಪಸನಿನ್ನ। ಮೂಡಿಗೆಯೊಳಂಬಿಲ್ಲ ವೀರನೆಂತ
ಹೆನಿನ್ನ । ನೋಡಿದರೆಯೆನಲೆಷ್ಟುಪಳಿವಳಿವನೆನುತ ಸುಪಚಾಪಟಂ
ದಂಬಡಿದನು ॥೪೮॥ ನಸುನಗೆಯೊಳಂದು ಪಾರ್ಥನ ಕರದ ಚಾಪಮಂ।
ಸಸಿದಲೆಯ ನೀಳ್ವಕೊಳಲರ್ಜುನನಡಾಯುಧದಿಂ। ಮಸಗಿ ತಿವಿಯ
ಲ್ಕದಂ ಕೊಳೆ ಕಣ್ಗಳಿಂ ಗಂಡಿಸಿ ಮ್ಮದರ ಕೊಂಬಿನಿಂದಂ ॥ ಬಿಸಿಗೊರಲ
ನಂ ಸೆಣಸಲೆಲೆ ತಪಸಿ ನೀನೀಗ। ಪುಸತಾದ ಕೈದುವಸ್ಕೊಡಕೊಂಡು
ಬಾರೆನೆ। ಲ್ಕಸಮಬಲನಾನೆನಗೆ ಕೈದುವೇಕೈಮಲ್ಲಯುದ್ಧಕನುಮಾ

ಗೊಂದನು ॥೪೯॥ ನೋಡಿದಾದೇವಿ ಪಾರ್ಥನನೆನುತಾ ಚಂದ್ರ। ಚೂಡ
ನರ್ಜುನನನಿದಿರೊಳು ನಿಂದು ಕೈಗಳಂ। ನೀಡಿ ಬಾಹುಗಳೆನಪ್ಪಳಿಸಿ ಬೊ
ಬ್ಬಿಡುತ ತೋರ್ದೋರೋರ್ವರಂ ತಡೆದು ಪಿಡಿದು ॥ ಝಾಡಿಸುವ ತೆಗವ ತೊ
ಡಚುವ ಪಿಡಿವ ನೇಮುವಂ। ನೋಡುವ ನಿಧಾನಿಸುವ ಭೀಷಣಧ್ವನಿಗೆ
ಳಂ। ಮಾಡುವ ವಿರೋಧಿಯಿಂಗಿತವರಿವ ಬಿನ್ನಣಂ ಹರನರರೊಳೆಸದಿ
ರ್ದುದು ॥೫೦॥ ಬಿಗಿವ ನಭವಂ ಬಿಡಿಸುವಂ ಪಾರ್ಥನಾಗ ಪೆರ। ತೆಗವ ನೀ
ಶಂ ಪಿಡಿವನರ್ಜುನಂ ಸಮ್ಮುಖಕೆ। ನೆಗವ ನಗಜಾಧವಂ ವಂಚಿಸುವನಾ
ನರಂ ಬಂಧಿಸುವನನಹಿಭೂಷನು। ಮುಗುಳೆ ಕಳುಚುವ ನೀ ಕಿರೀಟ ಹರ
ನಾರ್ಭಟಿಸಿ। ಪೊಗುವನುಬ್ಬಿದ್ದು ಪೊಕ್ಕೊಡೆ ಬಾಹುಸತ್ವದಿಂ। ತೆಗವ
ತುಡುಕುವ ತಡೆವ ಸಾಹಸಂ ನರಚಂದ್ರಚೂಡರೋಳ್ಪೊಸತಾದುದು
ಕತವಳೆಯದಿಂದ ಡೊಕ್ಕರದಿಂದ ವಂಗುಲದೆ। ನುರಗಬಂಧನದಿಂದಮಂ
ತರಲುಗಡಿಯಿಂದೆ। ಸರಿಸಮಂ ಕಡೆಯಿಂದೆ ತೋರಹತ್ತದಿನನಿತು ಮೊಡೆ
ಲಾಗಿ ಕಂಗೊಳಿಸುವ ॥ ಗುರುತರದ ಮಲ್ಲಯುದ್ಧದ ಜಾಣ್ಮೆ ನೋಳ್ಪ
ವರ್ಗರಿದೆನಿಸೆ ವಜ್ರನಿಭಮುಷ್ಟಿಯಿಂದರ್ಜುನಂ। ಹರನನೆರಗಲ್ತು ಪಸಿ
ನೀಂ ಕಟ್ಟೆ ಹೋಗೆನುತ ತಕಿವನಾತನಂ ತಿವಿದನು ॥೫೧॥ ಕುಣಿದವೀರ್ಧ್ವ
ಠಮುಷ್ಟಿಯಾರ್ದ್ವರಂಗಂಗಳೊಳ್। ಖಣಖಟಿಲು ಖಟಿಲೆಂಬರವಮುಣ್ಮೆ
ಹತಿಗಗ್ನಿ। ಕಣಮೊಗೆಯೆ ಪರಿಯೆ ಸೇದಾಂಬುವುಂ ರುಧಿರಜಲಮುಳಿವ
ಳಿದು ನಗನಾಗಳು ॥ ಸೆಣಸಲೆನ್ನೊಳು ಸಮರ್ಥನೆ ಶಬರ ನೀನೆನುತ್ತ
ಣಕದಿಂದೆರಗೆ ವಂಚಿಸುತ ಭವನೀ ನರನ। ಪಣೆಯನಣೆಯಲೊನ್ನಂದು
ನರನಳಿವ ಮುಷ್ಟಿಯಂ ನೆಗಪಿ ಬಳಿಕಿಂತೆಂದನು ॥೫೨॥ ಮಾಯದಿಂದೆ
ನ್ನ ಶರನಿವಹವಂ ಸವರಿದವಿ। ಡಾಯಕಿದೆ ಮುದ್ದ ಮಂತ್ರಾಸ್ತ್ರಮಂತ
ವೆನುಂಗಿ। ದಾಯತಿಕೆಗಿದೆ ಮೃತ್ಯುಚಾಪಮಂ ಕೊಂಡಗಮಾರ್ದ್ರಿಗಿಡೆ
ವಜ್ರದಂಡಂ ॥ ನೋಯಚೇಡಲವೆಲವೆ ಪೋಗು ಲುಬ್ಧಕನಿನ್ನು। ಕಾ
ಯಕಿದೆ ಕಡೆಯೆನುತ ಪಾರ್ಥನುಬ್ಬಿದ್ದ ಪ್ರಾ। ರಾಯದಂ ಹರನ ವಕ್ಷಸ್ಥ
ಳವನುರೆ ತಿವಿದು ನರನಾರ್ದು ಬೊಬ್ಬಿರಿದನು ॥೫೪॥ ಪರಿಹರಿಸಿ ನರನಂ
ಧುರಾವನಿಯೊಳೆಡೆಗೆಡಹಿ। ಹರನಂದು ಮೆಟ್ಟಿ ಮಲ್ಲಡಿ ಸೋಂಕು ಮಾ
ತ್ರದಿಂ। ದರುಣಜಲಮಂ ಕಾರಿದಂ ಬಾಯೊಳನ್ನಾಸಿಕದೊಳು ಮತಿ
ತೀವ್ರಮಾಗಿ ॥ ಕರಗಿದುದು ಚಿತ್ತಮರ್ಜುನನನಿರವ ಸೀಕ್ಷಿಸುತೆ। ಕರುಣ
ದಿಂ ಫಲ್ಗುಣಂ ನೊಂದನಕಟೆಂದು ಶಂ। ಕರನೆದೆಯೊಳಿರದೆ ಮನ ಮರು
ಗಿದ ಕೃಪಾಳುವಲ್ಲಾ ಶಿವಂ ಭಕ್ತರೆಡೆಗೆ ॥೫೫॥ ಶಿವನ ಮಲ್ಲಡಿ ಸೋಂಕೆ
ಲೊಡನೆ ಕೌಂತೇಯನವ। ಯವಮೆಲ್ಲ ನೆಗ್ಗಿ ಮೈ ಮುರಿದು ಚೇತರಿಸಿ
ಕಂ। ಣೆವೆದೆರದು ನೋಡಿ ತನಗಾವ ಜನ್ಮದ ಮಹಾಪಾತಕಂ ಸಮನಿಸಿ

ದುದೊ॥ ಶಿವಗೃಹಂಗಳನಿಳಿದು ಶಿವನಮತಮುಂ ಪೇಳಿದು। ಶಿವಭಕ್ತ
ಹರದಕಾರಣಂ ತನಗೆಪೇಳಿ। ಭವಮಾದುದೀ ತನಿಂದಾ ತನಂ ಮರೆ
ಗುವೆನೆಂದರ್ಜುನಂ ತಿಳಿದನು ॥೫೭॥ ಎಸವಮುಳಲಿಂ ಲಿಂಗವಂ ಮ
ಡಿ ಪರಿಪರಿಯ । ಕುಸುಮಂಗಳಂ ತಿರಿದು ತಂದು ಭಕ್ತಿಯೊಳೆ ಪೂ।
ಸಿಶೈವಮಂತ್ರಮಂ ಜಪಿಸಿ ಬಲವಂದು ಲಿಂಗವನೋಡಿ ಸಂತಸದೊಳ
ಅಸಮಾಕ್ಷದಕ್ಷಮುಖಶಿಕ್ಷಲೋಕಾಧ್ಯಕ್ಷ। ಹಸಗೆಡಿಸಿದಂ ಶಬರನೆಂ
ನಿನ್ನಿವನಶಿ। ಕ್ಷಿಸುವನಿತು ಸತ್ವಮಂ ಪಾಲಿಸೆಂದರ್ಜುನಂ ನುತಿಸಿ ಬ
ಕಿಂತೆಂದನು॥೫೮॥ ಇತ್ತಲರ್ಜುನನ ಭವನಂ ಪೂಜಿಸಿದಕುಸುಮ।
ತ್ತ್ಕಿರಾತಮಸ್ತಕದೊಳಿರೆ ಕೌತುಕದೆ। ಮತ್ತೆ ಪೂಜಿಸಲವು ಕಿ
ತಮುಂಡೆಯೊಳಿರಲು ಶಿವನೆಂದು ತಿಳಿದುಕೊಂಡ ॥ ಮತ್ತನಾದಂದೇ
ಕಾಯೆನುತ್ತರಗೆನರ। ನುತ್ತಮಾಂಗವನಿರದೆ ನೆಗಪಿ ಗಿರಿಜಾಧವಂ।
ತ್ತರಿಸಿದಂ ತನ್ನ ನಿಜಮೂರ್ತಿಯಂ ಶಬರವನುಳಿದು ಸಂತಸದೊಳ
ಎಳೆವೆರೆಯ ಬಂದೊರೆಯ ಕಂಜಡೆಯ ಪಂಚಾಸ್ಯ । ದೊಳೆವೊಳೆ
ಪಂಚದಶಲೋಚನದ ದಶಭುಜದ। ಪುಲಿದೊವಲ ಡಕ್ಕಡಮರುಗ ಶೂ
ಮುಖ್ಯಾಯುಧಂದಳೆದ ಹಸ್ತಂಗಳ॥ ಪೊಳೆವಶುದ್ಧಸ್ಫಟಿಕಸಂಕಾ
ಕಾಯದ । ಜ್ವಲಿಪ ಸೂರ್ಯೇಂದು ಶತಕೋಟಿ ತೇಜದ ತೊಡೆಯೊ
ಳೊಲಿದಿಪ್ಪ ಪಾರ್ವತಿಯ ಪಂಪಾವಿರೂಪಾಕ್ಷನೊಪ್ಪಿದಂ ನರನಿದಿರೆ
ಳು॥೫೯॥ ವೀರಭದ್ರಂ ಕುಮಾರಂ ನಂದಿ ಭೃಂಗಿಯುಂ। ಹೇರಂಬನಾ
ಯಾಗಿರ್ಪನಾಪ್ರಮಥ। ವೀರರೆಲ್ಲಂ ಶಾಬರವನುಳಿಗಂ ನಿಜರೂಪಿನಿಂ
ರನಬಳಸಿರಲ್ಕ॥ ಪಾರಾಶರಾತ್ರಿಮುನಿಯಾಂಗಿರಸಕೌಶಿಕಮು।
ಖು ವಶಿಷ್ಠಾದಿಗಳು ನರನದೆಸೆಯಿಂದ। ವಿಮಾರವ್ಯಮೂರ್ತಿಯಂ
ಡೆವೆನುತೆರಗಿದರು ಜಯ ಯೆನುತ ಶಿವನಿದಿರೊಳು ॥೬೦॥ ದುಂದು
ಯು ರಭಸದಿಂದರಳ ಮಳೆಯುಂ ಸುರ। ರ್ಮಂದಾಕಿನೀಧರನ ಮಣಿಮು
ಟದೊಳು ಜಯಜ । ಯೆಂದು ಕರದರ್ವೇದಶಾಸ್ತ್ರಗಮಂ ಪುರಾಣ
ಳತಿಹರುಷದಿಂದಂ॥ ನಿಂದು ನಿಜರೂಪಿನಿಂ ಪೊಗಳುತಿರ್ದವು ಮಹ
ನಂದದಿಂ ಶಿವಮೂರ್ತಿಯಂ ಕಂಡು ಪಾರ್ಥನಾ। ನಂದಾಶ್ರುತುಳ್ಕ
ಮನದಣಿಯೆ ಪೊಗಳುತಿರ್ದ ಮಹಾಭಕ್ತಿಯಿಂದಂ॥೬೧॥ ರುದ್ರಾ
ಗಿರಿಶಾಯ ಶರ್ವಾಯ ಕರುಣಾಸ, ಮುದ್ರಾಯ ಲೋಕನಾಥಾಯ ಗ
ದಾನವ । ಚ್ಛಿದ್ರಾಯ ನುತ ಖಂಡಪರಶವೇ ದಕ್ಷಮುಖಸಂಹಾರಕಾ
ಣಾಯ॥ ಭದ್ರಾಯ ಭರ್ಗಾಯ ಮೃತ್ಯುಂಜಯಾಯ ಬಹು। ರೌದ
ಸ್ವದಾಯ ದುರಿತಧ್ವಂಸಿನೇ ವರದ। ಮಾದ್ರಿಜಾಕುಚಭೂಷಣಾ
ಭೂತೇಶಾಯ ವಿಶ್ವಾತ್ಮನೇ ತೇ ನಮಃ॥೬೨॥ ನಿರುಪಮನಿರಾಧಾ

ನಿಷ್ಕಾಮಿಜಯ | ನಿರುತಂ ನಿಗಮದೂರ ನಿರ್ಮಾಯ ನಿರ್ಗುಣನಿಪ
ರಮಪಾವನ ಪಂಚಮುಖ ಪಂಚಬಾಣಹರ ಪಾರ್ವತೀಪ್ರಾಣನಾಥ||
ಕರಿಚರ್ಮವಸನ ಕರಧೃತ ಕಮಲಭವವದನ| ಸುರನರೋರಗನಮಿ
ತ ಸೂರ್ಯೇಂದುವಹ್ನಿಭಾ|ಸುರನಯನ ಸಲಹೆಂದು ಶಂಭುವಂ ಪೊಗಳಿ
ದಂ ಪಾರ್ಥನತಿಭಕ್ತಿಯಿಂದಂ||೬೩|| ದೇವಸಲಹಘವಿಪಿನದಾವಸಲ
ಹತುಳರಾ|ಜೀವಭವ ಶಕ್ರಸುತಪಾವನಪದಾಬ್ಜಲೋಲ| ಕಾವಳೀಭ
ಕ್ತಸಂಜೀವನ ಸುಜನಸೇವ್ಯ ಭಾವಿಸದಿರಪರಾಧಮಂ|| ಕಾವನಂಗೆಲ್ದ
ಲೋಕಾವನತ ಸಲಹು ಭುವ| ನಾವಲಂಬನ ದೇವದೇವ ನಿಜಭಕ್ತನನ
ಭಾವಮಂ ಮಾಡದುರಿಕಾವುದೆಂದರ್ಜುನಂ ಸಾವಧಾನದೆ ಪೊಗಳ್ದ
ನು||೬೪|| ಕರಕಮಲದಿಂದ ನರನಂತೆಗದು ಬಿಗಿಯಪ್ಪಿ| ಕರಗಟರು ನೀ
ಮಾಡಿದುಪಕೃತಿಯೆ ಪೂಜೆನಿಂ | ಸುರುಚಾಪಬುದ್ಗಬಾಣಂಗಳಂ ಕೊ
ಳ್ಳೆನುತ ಕೊಟ್ಟು ನಿನ್ನಿಷ್ಟವೇನು|| ಒರೆಯೆನಲ್ಗೀಪಪಾಕಿಸುಪಾಶುಪ
ತಮಹಾ| ಶರವನೆನಗೊಟ್ಟನುಮೆಯಿತ್ತಳಂಜನಶರವ | ನಿರದಾಗೆ
ಹರಸುರಗಣಾಧಿಕರ್ಕೊಟ್ಟರೊಳಿದೊಂದೊಂದು ಬಾಣಂಗಳಂ||೬೫||
ಕೊಂಡಾಡುವಖಿಳಮುನಿನಿಕರಮಂ ಮನ್ನಿಸುತೆ| ಮುಂಡಾಡಿ ಫಲು
ಗುಣನನಕ್ಕರಿಂ ಬೀಳ್ಕೊಟ್ಟು |ಚಂಚಕರಪಾವಕಶಶಾಂಕನಯನಂ ರ
ಜತಪರ್ವತಂ ಬೊಕ್ಕನಂದು || ಖಂಡಪರಶುವಿನ ಲೀಲೆಗಳಿಪ್ಪತ್ತೈದು
ಕಡೆ| ಗಂಡವೀಬಳಿಗ ನಲ್ಪಾರ್ಥನಾ ಬಾಣಮಂ| ಕೊಂಡಬೇಗೈದನವ
ನಾರಮುಗನಾಕಥೆಯನುಸುರೆನಲ್ಕಿಂತೆಂದನು||೬೬|| ಇದು ಸಕಲವೀರ
ಮಾಹೇಶ್ವರರಸ್ವಮಲ| ಹೃದಯಾಬ್ಜಮಿತ್ರ ಸುರುಷಟ್ಸ್ಥಲಬ್ರಹ್ಮ
ವೆಂಬುದಧಿವರ್ಧನಸೋಮನೆನಿಪ ಗುರುಸಿದ್ಧವೀರೇಶ್ವರನ ಕರಜಾ
ತನು|| ಸದಮಲಜ್ಞಾನಿ ಸಕಲಾಗಮ ಪುರಾಣಕೋ| ವಿದನಾವಿರೂಪಾ
ಕ್ಷಪಂಡಿತಾರಾಧ್ಯರತಿ| ಮುದದಿಪೇಳ್ದೀ ಚೆನ್ನಬಸವಪುರಾಣಕಥೆ
ಯೊಳಗೆ ನಾಲ್ಕನೆಯ ಕಾಂಡಂ||೬೭|| ಇಂತೆಸೆವ ಚೆನ್ನಬಸವೇಶ್ವರಪು
ರಾಣಮಂ|ಸಂತಸಂ ಬರೆದವರ್ಗೋದಿದರ್ಗರ್ಥವಾ| ದ್ಯಂತಮಂಬಿಡ
ದೆಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ|| ಸಂತತಂ ಸಕಲಸುಖ
ಮಂ ಸಕಲಭೋಗಮಂ| ಸಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ|
ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದಂ||೬೮||

ನಾಲ್ಕನೆಯ ಕಾಂಡದಲ್ಲಿ ೧೩ನೇ ಸಂಧಿ ಮುಗಿದುದು

ಅಂತು ಸಂಧಿ ೫೩ಕ್ಕಂ ಪದ ೭೦೮೮ಕ್ಕಂ ಮಂಗಳ.

ನಾಲ್ಕನೆಯ ಕಾಂಡ ಸಂಪೂರ್ಣವಾದುದು

ಶ್ರೀರಸ್ತು.

# ಚನ್ನಬಸವೇಶ್ವರಪುರಾಣವು.

## ೫ನೇ ಕಾಂಡ—೧ನೇ ಸಂಧಿ



ಸೂಚನೆ॥ ಸೋಮಸೂರ್ಯಾನ್ವಯದವರೊಳಗೆ ಪಾಂಡವ| ಭೂಮಿಗೋಸುಗ ಬಂಧುಗಳ ವಧಿಸಿದುದ ಸಿದ್ಧ। ರಾಮ ನೀಂ ಕೇಳೆಂದು ಚನ್ನಬಸವೇಶ್ವರಂ ಕರುಣದಿಂ ನಿರವಿಸಿದನು

ಪದ॥ ವಿಷ್ಣುನೇತ್ರಾರ್ಚಿತಪದಾಂಭೋಜನಾ ಪರಮ| ವಿಷ್ಣುಸುಕುಮಾರದಹನೀಕೃತಸುಭಸಿತಾಂಗ| ವಿಷ್ಣುನಾಭೀಕಮಲಸಂಭವಶಿರಶ್ಛೇದವಿಷ್ಣುಕಂಕಾಳಧರನೆ ॥ ವಿಷ್ಣುಗಾಯಕಮೇರುಚಾಪವಿಲಸಿತಹಸ್ತ । ವಿಷ್ಣುವಾಹನವೈರಿಭೂಷಿತಕರಶ್ರವಣ । ವಿಷ್ಣುಪದಕೇಶಪಂಪಾವಿರೂಪಾಕ್ಷ ರಕ್ಷಿಸು ಸಕಲಭಕ್ತಜನರಂ ॥ ೧ ॥ ಆಲಿಸೈ ರಾಮ ಸೃಷ್ಟಿಯ ಮೊದಲೊಳಬುಜಜಂ । ಭಾಳಲೋಚನನವರದಿಂದಪೆಯಮಂಗಳೊಳು| ಲೀಲೆಯಿಂದಂ ನವಬ್ರಹ್ಮರಂ ಪಡೆದನವರೊಳಗತ್ರಿಮುನಿಪನಿಂದಂ ॥ ಪೇಳಲೇಂ ಚಂದ್ರನುದ್ಭವಿಸಲವನಿಂದಮೌವಿ| ಶಮಲತರಶಶಿವಂಶವಾಯ್ತಾತನಿಂ ಬುಧಂ। ಭೂಲತಾಂಗೀವರ ಪುರೂರವಂ ಬುಧನ ತನುಸಂಭವಂ ತಾನಾದನು ॥೨॥ ಆ ಪುರೂರವಗಮುರ್ವಶಿಗೆ ನಂದನನಾದ| ನೀ ಪರಿಯೊಳಾಯುಃ ಕುಮಾರನವನಿನ್ನಹುಷ| ನಾಪರಾಕ್ರಮನಹುಷನಿಂದಂ ಯಯಾತಿ ಯದು ಪೂರುಗಳು ತತ್ತನುಜರು॥ ಈ ಪೂರು ಯದುಗಳಿಂ ಸೋಮಕುಲವೆರಡಾಯ್ತು। ಭೂಪಾಲ ಯದುವಿನಿಂ ಯಾದವರ ಕುಲಮಾಯ್ತು। ರೂಪುಯುತ ಪೂರುವಿಂ ಪೌರವಾನ್ವಯಮಾದುದೆಲೆ ರಾಮ ಕೇಳೆಂದನು॥೩॥ ಪೂರುವಿಂ ಜನಮೇಜಯಂ ತನ್ನೃಪಾಲಂಗೆ| ಧೀರ ಪ್ರಚಿನ್ವನಾತಂಗೆ ಸಂಯಾತಿಯಾ| ಭೂರಮಣನಿಂದೆಹಂಪಾತಿಯವನಿಂ ಸಾರ್ವಭೌಮನಾ ಭೂಮಿಪಂಗೆ॥ ವೀರಜಯಸೇನನವನಿಂದರಿಂದ್ರಂ ತದ್ಧರಾರಮಣನಿಂ ಮಹಾಭೌಮನಾ ಭೂಪನಕು । ಮಾರನಯುತಾನೀಕಮಾತನಿಂ ಕ್ರೋಧನಾತನಿಂ ದೇವಾತಿಯ॥೪॥ ದೇವಾತಿಯಿಂ ರುಚಿಕನಾತನಿಂ ರುಕ್ಷನಾ ಭೂವರಂಗಂ ಮತಿವರಂ ತನ್ನೃಪಾಲಂಗೆ। ಕೋವಿದಂ ತೃಷ್ಣುವಾತಂಗಿಲನುಮಾತಂಗೆ ದುಷ್ಯಂತನು ಭೂಪನ॥ ದೇವಿಶಾಕುಂತಳೆಯ ವರ್ಗಭರತಂ ಸುತಂ| ಭಾವಿಸಲು ಭರತನ ಕುಮಾರಂ ಹುಮನ್ಯುಮು| ತ್ತಾವಸುಧೆಯರಸಗೆ ಸುಹೋತ್ರನವನಿಂ ಹಸ್ತಿ ಹಸ್ತಿಗೆ ವಿಲೋಚನಾಖ್ಯಂ ॥೫॥ ವರವಿ

ಲೋಚನನಿಂದಜಾಮಿಳನವಂಗೆಸಂ। ವರಣನಾತಂಗೆದಿನಕರಪುತ್ರಿತ
ಪತಿಯೊ। ಳ್ಕುರುವಾನೃಪಂಗಂಪರೀಕ್ಷಿತಂತತ್ಸುತಂಭೀಮಸೇನಸಂ
ತ್ರಿಳಿಯುಲು|| ಧರಣಿಪತಿಭೀಮಸೇನಂಗಂಪ್ರದೀಪನಾ। ನರಪತಿಗೆಶಂ
ತನಾಶಂತಭೂಪಾಲಂಗೆ। ವರವಸಿಷ್ಠನಶಾಪದಿಂದಂಪ್ರಭಾಸವಸುಸಂ
ಜನಂತಾನಾದನು ||೬|| ಚಿತ್ತಹರುಷದೇಶಂತನಾತಂಗೆಭೀಷ್ಮನೆಂ।
ದಿತ್ತುಪೆಸರಂಸಲಹಲುಳಿದವಸುಗಳೆಬಲಂಬೆ। ತ್ತುಭೀಷ್ಮಂಸುಪ್ರ
ತಾಪದಿಂದಹಿತರಂಗಲ್ದುಸುಖಮಿರಲಾಗಳು|| ಅತ್ತಲಜಶಾಪದಿಂದದ್ರಿ
ಕೆಯೆನಿಪ್ಪಮರಿ। ಯುತ್ತುಂಗಮತ್ಸ್ಯರೂಪಿಂಗಂಗೆಯೊಳಗಿರೆಮಿ। ಯು
ತ್ತಳೆದೊಳಿರ್ದು ಪರಿಚರಿವವಸುವಿನಿಂದ್ರಿಯಂಬೀಳಲದುಗರ್ಭ ವಾ
ಯ್ತು||೭|| ಅದನೊರ್ವಜಾಲಗಾರಂತಂದುಸೀಳೆಲದುರುದರದೊಳ
ಗಿರ್ದಶಿಶುವೆರಡನಾಸೂತನತಿ। ಮುದದಿಂದವಸುಗೀಯೆಪೆಣ್ಣನಾತಂ
ಗಿತ್ತುಕುವರನಂತಾರಕ್ಷಿಸೆ || ಪದೆದಾತನಂಮತ್ಸ್ಯನೃಪನೆಂದುಕರೆದ
ನಾಸುದತಿಘನಮತ್ಸ್ಯಗಂಧಿನಿಯುಂಪರಾಶರಂ। ನದಿಯತಟದೋ
ಳ್ಪ್ರೀತಿಯಿಂಕೂಡಜನಿಸಿದಂಮುನಿಪವೇದವ್ಯಾಸನು ||೮|| ಇಂತು
ಯೋಜನಗಂಧಿಯುರೆಬೇಂಟೆಗೈತಂದು। ಶಂತನುವಳಂಕಂಡುಬೆಮಿಸಿಕ
ರೆಯಲ್ಕಾಗ। ಕಾಂತೆಯೊಲ್ದುದೊಡವಂಬೋಗಿಚಿಂತಿಸೆಭೀಷ್ಮನೀಕೆ
ಯಂಕೈಗೂಡಿಸೆ|| ಅಂತವಳಗರ್ಭದೊಳುಚಿತ್ರಾಂಗದಂಘರ। ಕಾಂ
ತಂವಿಚಿತ್ರವೀರ್ಯ್ಯಂಜನಿಸಿಪಗಗಳಿಂ। ದಂತವಾಗಲ್ಕವೇದವ್ಯಾಸನಿಂದ
ವನಕಾಂತೆಯರ್ಬೆಸಲ್ದರು ||೯|| ಜನಿಸಿದರುಧೃತರಾಷ್ಟ್ರಪಾಂ
ಡುವಿದುರರವರ್ಗ। ಜನಪಧೃತರಾಷ್ಟ್ರಂಗೆಕೌರವೇಶ್ವರನಾದಿ। ತ
ನುಭವನೂರ್ವರ್ಸ್ವರಾಪಾಂಡುವಿಗೆಧರ್ಮ್ಮಚಾರ್ಯ್ಯವರಾತ್ಮಜರಾದರು||
ಮುನಿಶಾಪದಿಂಪಾಂಡುವಳಿಯೆಹಸ್ತಿನಪುರದೊ। ಳುಳಿಯೆಕೌರವ
ಪಾಂಡವರ್ಗ್ಗಮತ್ಸರವಾಗಿ। ಮನವೊಲ್ದುಪಾರಿಷಾವತದೊಳಿರುತ
ರಗುವನೆಯಂಕಳದುಪೊರಮಟ್ಟರು||೧೦|| ಘೋರರಾನನದೊಳುಹ
ಡಿಂಬನಂಮುರಿದಗ್ರಹಾರದೊಳುಬಕನಮರ್ದಿಸಿದ್ರುಪದನಂದನೆಗ।
ಭೂರಮಣರೈವರುಂ ವರರಾಗಿಕೌರವನಪರಿಭವಿಸುಮತ್ತೆಬಂದು||
ಓರಂತೆಭೂಪರಿಂದ್ರಪ್ರಸ್ಥಮಂಕೊಂಡು। ಕೌರವನಕೂಡದ್ಯೂತಮಾ
ಡಿಸೋಲಲ್ಕವರ। ಧುರ್ಯೋಧನಾಕೌರವಂಕೊಳಲ್ಕತ್ತೆಘೋರಾರ
ಣ್ಯಮಂಪೊಕ್ಕರು || ೧೧ || ಕೌರವರನೆಲ್ಲರಂಜಯಿಸಲೆಂದಾನರಂ।
ಮಾರಹರನಂಮುನಿಯುಮತವಿಡಿದುಪಾಶುಪತ। ಘೋರಶರಮಂಪ
ಡೆದುನಾಕಮಂಪೊಕ್ಕಸುರರಂಕೊಂದುಭೂಮಿಗೈದಿ|| ಭೂರಮಣರ

ಜ್ಞಾತವಾಸದಿಂ ಮತ್ಸ್ಯನಂ। ಕಾರಣದೊಳೋಲೈಸಿಯಜ್ಞಾತದಿಂ ಮೇ
ಲೆ। ಧಾರುಣಿಯ ಹುದುಭಾಗೆಗೋಸುಗಂ ಪಾಂಡವರ್ಕಳಹೆಕುದ್ಯೋ
ಗಿಸಿದರು॥೧೨॥ ವಸುದೇವದೇವಕಿಗೆ ಜನಿಸಿ ಕೃಷ್ಣಂ ಬಳಿಕ। ವಸುಮ
ತಿಯ ಭಾರವಂ ಕಳೆಯೆ ಪಾರ್ಥಂಗಾಗ। ಳೆಸವ ಸಾರಥಿಯಾಗಿ ಪಾಶು
ಪತಬಾಣದ ಮಹಾತ್ಮೆಯಿಂ ನರನಾಗಳು॥ ಮಸಗಿ ಸಂಗರದೊಳಗ್ರಜ
ಗುರುಪಿತಾಮಹಾ। ದ್ಯಸಮ ಕುರುಸೇನೆಯಂ ಬಿಡದೆ ಸಂಹರಿಸಿದಂ।
ವಸುಧೆಯೊಳು ಪೆಣ್ಮಣಿಗಳಿಯ ದಿಹರಾರೆಂದು ಚನ್ನಬಸವನ್ನುಡಿದ
ನು॥೧೩॥ ವಿರಚಿಸೆಲೆ ಚನ್ನಬಸವೇಶ ಪಾಂಡವರಿಂತು। ಧರೆಯ ಹುದು
ಭಾಗೆಗೋಸುಗರಳಿದರಿಂ ಮುಂದೆ। ತರುಣಿಗೋಸುಗರಳಿದರೆಂತೆನ
ಲ್ವೇಳ್ವೆನಾಂ ಕೇಳ್ವೈಯ ಸಿದ್ಧರಾಮ॥ ತರುಣಿವಂಶದೊಳೆಸವ ರಘುರಾ
ಮನೆಂಬಾತ। ನರಸಿಗೋಸುಗಮಳಿದರೆನಲಾರಮಗನಾತೆ। ನಿರದಾ
ತನರಸಿಯಿಂದಳಿದರಾಕ್ಕಾರಣವನುಸುರೆನಲ್ಕಿಂತೆಂದನು ॥೧೪॥ ಒ
ರವೆನಾಂ ಸುರಾಮ ಸೂರ್ಯಾನ್ವಯದೊಳಾದ। ಧೊರೆಗಳಾರೆಂಬುದಂ
ವಿಸ್ತರಿಪೆ ಪೂರ್ವದೊಳು। ಹರನಾಜ್ಞೆಯಿಂದಾದಿಬೊಮ್ಮ ಸಂಘಟವ
ಶಚಿಯೆಂಬನುದಯಿಸಿದನಲ್ಲಾ॥ ಇರಲಾತನುದರದೊಳು ಕಶ್ಯಪಂ
ಜನಿಸಿದಂ। ವರಕಶ್ಯಪಂಗಂ ವಿವತ್ಸನಾತಂಗಾದ। ನುರುತರ ಚರಿತ್ರ
ವೈವಸ್ವತಂ ಮನುವವಂಗಿಕ್ಷ್ವಾಕು ಮಗನಾದನು॥೧೫॥ ಆತಂಗೆ ನಿಮಿ
ವಿಕುಕ್ಷಿಗಳೆಂಬ ಪೆಸರತನು। ಜಾತರು ವಿಕುಕ್ಷಿಗೆ ಪುರಂಜಸುತ ಭೂಪಾ
ಲ। ನಾತಂಗೆ ನೇನಸಸ್ಸವಾತಂಗೆ ಪೃಥು ಮಾನ್ಯ ಪಾಲಕನ ಸಂತತಿಯೊ
ಳು॥ ಜಾತನಾದಂ ಕುವಲಯಾಶ್ವನಾ ಸಂತತಿ। ವ್ರಾತದೊಳು ಯುವ
ನಾಶ್ವಂ ಜನಿಸಿದಂ ಬಹುತ್ರ। ಷ್ಮತುರಂಯಾಗಮಂ ತ್ರೋದಕವನೀಂ
ಟಲುಂ ಮಾಧಾಂತಮಗನಾದನು ॥೧೬॥ ಅತ್ರಿದಾನಿ ಮಾಂಧಾತಗಂತ
ದಂಗನೆಬಿಂದು। ಮತಿಗಂಬರೀಷ ಪುರುಕುತ್ಸರೆಂಬೀರ್ವರುಂ। ಸು
ತರಾಚರೆಸವ ಪುರುಕುತ್ಸಸಂತತಿಯೊಳ್ಸಿಸತ್ಯವ್ರತಂ ಜನಿಸಿದಂ॥ ಅತು
ಳಬಲ ಸತ್ಯವ್ರತಂಗಾ ತ್ರಿಶಂಕು ಭೂ। ಪತಿಯಾದನಾತಂಗೆ ಜನಿಸಿದಂ
ಬಳಿಕ। ಸೂನೃತ ಹರಿಶ್ಚಂದ್ರನಾತಂಗೆ ಸಂಜನಿಸಿದಂ ಲೋಹಿತಾಶ್ವ
ಕುಮಾರನು ॥೧೭॥ ಆ ಲೋಹಿತಾಶ್ವವಂಶಾವಳಿಯೊಳಾದಂ ನೃ।
ಪಾಲ ಸಗರಂ ತದಾತ್ಮಜ ಸಮಂಜಸನವಗೆ। ಲೀಲೆಯಿಂದಂಶುಮಾನೆಂ
ಬವಂ ಸುತನಾಟನಂ ತಗೆದಿಳೀಪನೃಪನು ॥ ಕೇಳಾ ದೊಡಾದಿಳೀಪಂ
ಗಂ ಭಗೀರಥಂ। ಮೇಳೆದಾತ್ಮಜನಾ ಭಗೀರಥನ ವಂಶದೊಳು। ಸ್ಥೂಲ
ಬಾಹುವೆನಿಪ್ಪನಾದನಾತಂಗೆ ರಘು ರಘುನ್ನಪಂಗಜನಾದನು॥೧೮॥ ಆ

ಮಹೀಪತಿಯ ಗರ್ಭದೊಳುದಿಸಿದಂ ಸುಗುಣ । ಧಾಮ ದಶರಥನಾತ
ನುದರದೊಳಗೆಂದು ರಘು। ರಾಮನುದ್ಭವಿಸಿ ತಾಂ ಬಾಲಲೀಲೆಯ ಕಳೆ
ದು ತಾಟಕಿಯ ಸುರೆಮರ್ದಿಸಿ॥ ಭೂಮಿಸುತೆಯಂ ಮದುವೆಯಾಗಿ ಬ
ರುತಾ ಪರಶು। ರಾಮನಡ್ಡೈಸಲಾತನ ಚಾಪವಂ ಸೆಳೆದು। ಪ್ರೇಮದಿಂ
ತಮ್ಮ ಪುರವಂ ಪೊಕ್ಕು ತಂದೆಯಾಜ್ಞೆಯಲಿ ಕಾನನಕೈದಿದಂ॥೧೯॥ ಭ
ರತಶತ್ರುಘ್ನರೆಂಬನುಜರಲ್ಲಿಗೆ ಬಂದು । ಕರದಡೊಲ್ಲದೆ ತಮ್ಮ ಲಕ್ಷ್ಮ
ಣಂ ತಾನುತಂ ಸರಸಿಸಹಿತಿರುತಲ್ಲಿ ಸೂರ್ಪನಖಿಯೆಂಬ ರಕ್ಕಸಿಯ ನಾ
ಸಿಕವನರಿದು॥ ಖರದೂಷಣಾದಿಖಳರಂ ಕೊಂದು ಹರುಷದಿಂ। ದಿರುತೆ
ಹೊಮ್ಮಿಗ ಬರಲು ಕೊಲಪೋಗೆ ಸೀತೆಯಂ। ದುರುಳರಕ್ಕಸನೊಯ್ಯು
ತ್ತಿರೆ ತಡೆಯಲಾಜಟಾಯುವನಿರದೆ ಮರ್ದಿಸಿದನು॥೨೦॥ ಸತಿಯ ನಾ
ರಾವಣಂ ಕದ್ದೊಯ್ಯಲೀ ರಾಮ। ನತಿದುಃಖವಂ ಮಾಡುತಲ್ಲಿಂದೆ ಲೋ
ಕಸ। ನ್ನುತೆಯಪ್ಪ ಸೀತೆಯಂ ಬೆದಕುತೈತರುತಾ ಜಟಾಯುವಿರೆ
ಕಂಡು ದಹಿಸಿ॥ ಗತಿಯಾವುದೆನುತಿರಲು ಹನುಮಂತ ಬರಲಾತ। ನತಿಶ
ಯವ ಕಂಡು ಕಾಣಿಸಿಕೊಂಡು ವಾಲಿಯಂ। ಹತಿಸಿ ಸುಗ್ರೀವನಂ ಕೂ
ಡಿಕೊಂಡಬ್ಧಿಯೊಳ್ ಕಟ್ಟಿದರ್ಸೇತುವೆಯನು॥೨೧॥ ಹರುಷದಿಂ ಕಪಿಕ
ಟಕಮಂ ಕೂಡಿಕೊಂಡಾಗ। ಶರಧಿಯಂ ದಾಂಟಿ ರಾವಣ ಕುಂಭಕರ್ಣಾ
ದಿ। ದುರುಳರಕ್ಕಸರನೆಲ್ಲರ ಹತಿಸಿ ಬಳಿಕ ವನತಮ್ಮಂಗೆ ಪಟ್ಟಗಟ್ಟಿ॥ ಮರ
ಳಿ ಸೀತೆಯನು ಕೈವಿಡಿದು ರಾಮಂ ತನ್ನ। ಪುರಕೆ ಬಂದಂ ಸತಿಯರಿಂ ಕೆ
ಟ್ಟರಿವರೆಂದು। ಕರುಣದಿಂ ಚೆನ್ನಬಸವೇಶ್ವರಂ ಸಿದ್ಧರಾಮೇಶಂಗೆ ನಿರ
ವಿಸಿದನು ॥೨೨॥ ಎಲೆ ಚೆನ್ನಬಸವೇಶ ಪೇಳ್ವುದೆನಗಿನ್ನು ಭಯ। ಕು
ಲದೊಳತಿದಾನ ಧರ್ಮೋಪಕಾರಂಗಳಿಂ। ಇಳೆಯನಾಳಿದರಾಯರುಗ
ಳದಾರ್ಚಕ್ರವರ್ತಿತ್ವಮಂ ತಳೆದರಾರು॥ ಬಳಿಕಳವರೊಳಗೆ ಕೆಟ್ಟವರ
ದಾಸತ್ಕೀರ್ತಿ। ಗೊಳಗಾಗಿ ಬಾಳ್ದರಾರೆಂಬುದಂ ಕೇಳ್ವೆನೆನ। ಲೊಲ
ವಿನಿಂ ಸಿದ್ಧರಾಮೇಶಂಗೆ ಚೆನ್ನಬಸವೇಶನಂದಿಂತೆಂದನು॥೨೩॥ ಧರಣಿ
ಪ ಹರಿಶ್ಚಂದ್ರ ನಳ ಪುರೂರವ ಸಗರ। ಪುರುಕುತ್ಸ ಕಾರ್ತವೀರ್ಯರು ಚ
ಕ್ರವರ್ತಿಗಳು। ಪರಿಗಣಿಸಲರುವರುಂ ವೈನ್ಯಸ್ತಹೋತ್ರಂ ಮರುದ್ವ
ರಂ ಮೇಣ್ತ್ತಳಿಯಲು ॥ ಭರತ ನಾಭಾಗ ಶಶಿಬಿಂದ್ವಂಬರೀಷ ಗಯ। ಪರಿ
ಕಿಸೆ ದಿಳೀಪನೃಪ ರಂತಿದೇವ ಯಯಾತಿ । ವರಭಗೀರಥ ರಾಮ ನಹು
ಷ ಮಾಂಧಾತೃಗಳು ಷೋಡಶಮಹೀಪಾಲರು॥೨೪॥ ಆಲಿಸೆಲೆ ಸಿದ್ಧರಾ
ಮೇಶ ಪೂಜಾಡಿಭೂ। ಪಾಲರೊಳು ನಳಧರ್ಮಜರ್ಮದ್ಯದಿಂದೆಯುದು।
ಜಾಲಂ ಪರಾಂಗನಾವ್ಯಸನದಿಂ ದಿಂದ್ರಕೀಚಕ ವಾಲ ದಶವದನರು ॥

ರೆಯೊಳೆಂಬತ್ತುನಾಲ್ಕುಂಲಕ್ಷ । ಜೀವರೊಳುಗೋಜನ್ಮವುತ್ತಮ
ಮುದಕ್ಕಯುಂನರರಧಿಕಮಾನರರೊಳು॥ ಭಾವಿಸಲುಶಿವಭಕ್ತರೇಷ್ಠ
ರವುದಕೆವೀರ। ಶೈವವೇವೆಗ್ಗಳಮುದಕ್ಕಯುಂಷಟ್ಸ್ಥಲದ। ಕೋವಿದ
ರವುತವೆವೆಗ್ಗಳವುದಕೆಪರವಾದುದಿಂನಿಲ್ಲಕೇಳೆಂದನು॥೪೯॥ ಅದು
ಕಾರಣಂಷಟ್ಸ್ಥಲಬ್ರಹ್ಮಯುತರನ। ಲ್ಲದೆಪುಗಿಸರೀಬಾಗಿಲಿಂದತ್ತಲಿ
ಷ್ಟಲಿಂ। ಗದನೇವುಮಿಲ್ಲನಿನ್ನಂಪುಗಿಸರಿಂತೆನಲ್ಕಲ್ಲಿರ್ದ ಶರಣರೆಲ್ಲ॥
ಇದುಸಹಜಮಿಷ್ಟಲಿಂಗವುಮಿಲ್ಲದಿರ್ಪವರ। ವದನಮುಂನೋಳ್ಪುದ
ನುಚಿತವೆನಲ್ಕಲ್ಲಮಂ। ಸದಮಲಂಸಿದ್ಧರಾಮಂಗಿಷ್ಟಲಿಂಗವೇಕೆಂದು
ಮತ್ತಿಂತೆಂದನು॥೫೦॥ ಅಂಬರವನಡರುವಂಗೆಟ್ಟಗೋಲೇಕೆಬಿಡೆ । ದಂ
ಬುಧಿಯದಾಂಟುವಂಗೇಕೆಹರಗೋಲ್ಪೇಳು। ಯೆಂಬುದಂವಿಚಾರಿದೀ
ನಿಸ್ಸೀಮಸಿದ್ಧರಾಮಂಗಿಷ್ಟಲಿಂಗಮೇಕೆ॥ ತಾಂಬಗೆಯೆಸರ್ವಾಂಗಲಿಂ
ಗಿಯೆನೆಚನ್ನಬಸವಂಬಳಿಕಸಿದ್ಧರಾಮನೊಳಿಷ್ಟಲಿಂಗಮುಂ। ದೆಂಬು
ದೇತನಗಿಲ್ಲಸರ್ವಾಂಗಲಿಂಗಿಯಾದಂದಮುಂಪೇಳೆಂದನು ॥೫೧॥ ಚನ್ನ
ಬಸವೇಶನೀಂನೋಡೆನುತಹರುಷದಿಂ। ತನ್ನಂಗದೊಳುಲಿಂಗಚಯ
ದಗೊಂಚಲುಗಳಂ। ಚನ್ನಾಗಿತೋರಲ್ಕೆಸರ್ವಾಂಗಲಿಂಗಿತ್ವಮಂತೆಜಗ
ಜಣಿಯಾಟದಗನ್ನಮಲ್ಲದೆಯೇಕಲಿಂಗನಿಷ್ಠಾಪರಂ। ಮುನ್ನಲ್ಲಮನೆ
ಗೆಬಂದಲ್ಲಮನದಹುಸಲ್ಕೆ । ನಿನ್ನಪಣೆಗಣ್ಣರದಜಂಗಮದ್ರೋಹಿನೀ
ನೆಲರಾಮಹೋಗೆಂದನು॥೫೨॥ ನಿಲ್ಲನೀಜಂಗಮದ್ರೋಹಿಯೆಂಕರ
ದುತಂ। ದಿಲ್ಲಿಸರ್ವಾಂಗಲಿಂಗಮನುಂಟುಮಾಡುತಿ। ಪ್ಪಲ್ಲಮಂನೀಂಗು
ರುವನುಳಿದುಲಿಂಗವತಂದೆನೀನದೇಂನಾಮಾನ್ಯನೆ ॥ ಸಲ್ಲದೀವರ್ಗರ
ಮೊಗಂನೋಳ್ಪುದೆನೆಕೇಳ್ದಬಳಿ । ಕಲ್ಲಮಂಗುರುವನುಳಿದಾಲಿಂಗ
ಮಂತೆಂದು । ದಿಲ್ಲಮುದ್ಗರುಸುಚಿತ್ಕಳೆಯುಮಾಲಿಂಗದೊಳಗಿದೆತಿಳಿ
ದುನೋಡೆಂದನು॥೫೩॥ ಪರಿಕಿಸಲ್ಕಮ್ಮಗುರುವರನಶಿವಸೋದರಂ।
ಗುರುವಲಾನೀನೆನಗೆಗುರುವೀತನೇಪರಮ । ಗುರುವುಬಸವಂಣನಿ
ರೆಗುರುವನೆಂದುಳಿದನೆನೆಕೇಳ್ದುಶಿವಶರಣರೆಲ್ಲ॥ ಪರಿತೋಷದಿಂದೊ
ಪ್ಪೆಸಿದ್ಧರಾಮಂಪ್ರಭುವಿ । ಗೊರೆದನೆನಗಾವಗತಿಯೆನಲಿಷ್ಟಲಿಂಗ
ಮಂ। ನಿರುತದಿಂಪಡೆದಲ್ಲದಾಗದೆನಲೆನಗೆದೀಕ್ಷೆಯನೀವರಾರೆಂದನು॥
ಬಸವಮೊದಲಾದೇಳುನೂರೆಪ್ಪತಮರಗಣ । ಮೊಸೆದುಮರ್ತ್ಯಕೆ
ವೀರಶೈವಮಂಬಿಡದುದ್ಧರಿಸಲೆಂದುಬಂದುದಿವರಿಗೆಪರಣಲಿಂಗಸಂ
ಬಂಧದುರುಷಟ್ಸ್ಥಲವನು ॥ ವಸುಧೆಯೊಳುಬೋಧಿಸುವಶಿವಚಿತ್ಕ
ಳಾರೂಪ। ಮುಸಮಪ್ರಸಾದಮುಖಬಂಬಂದುದೀಚನ್ನ । ಬಸವಂಣ

ನೆಂಬನಾಮದೊಳಿಷ್ಟಲಿಂಗಮಂ ನಿನಗೆಪಾಲಿಸುವೆನೆನಲು ॥ ಹರುಷ ದಿಂದೆದ್ದು ಸಾಷ್ಟಾಂಗವಿನಮಿತನಾಗಿ| ಮರಳೆದ್ದು ಕೊಂಡಾಡಿಗುರುಚನ್ನಬಸವೇಶ| ನಿರುತವೆಂಬತ್ತುನಾಲ್ಕುಂಲಕ್ಷಜೀವರಾಸಿಗೆಮುಖ್ಯಗೋಜನ್ಮವು॥ ನರಜನ್ಮಮದಕಧಿಕವೆಂದೆಲಾತಜ್ಜೀವ| ಪರಿಭೇದಮಂತನ್ಮನುಷ್ಯಜನ್ಮದಪಿಂಡ| ದಿರವನದರುದಯಮಂಪೇಳ್ದು ನಗೆ ದೀಕ್ಷೆಯುಂಪಾಲಿಸೆನಲೆಂತೆಂದನು॥೯೬॥ ಇಂತೆಸವಚನ್ನಬಸವೇಶ್ವರ ಪುರಾಣಮಂ| ಸಂತಸಬರದವರೆಲ್ಲೋದಿದರ್ಗರ್ಥವಾ| ದ್ಯಂತಮಂಬಿಡದೆಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂಕೇಳ್ದವರ್ಗೆ॥ ಸಂತತಂಸಕಲಸುಖಮಂಸಕಲಭೋಗಮನ| ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ| ಕಂತುಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ

ಐದನೆಯಕಾಂಡದಲ್ಲಿ ೪ನೇಸಂಧಿ ಮುಗಿದುದು.

ಅಂತು ಸಂಧಿ ೫೭ಕ್ಕಂ ಪದ ೨೫೨೩ಕ್ಕಂ ಮಂಗಳ.

೫ನೇಸಂಧಿ

ಸೂಚನೆ॥ ಎಸವಪಿಂಡೋತ್ಪತ್ತಿಯಂಬಳಿಕ ವ್ಯಾಕರಣ| ಪಸಿಗೆಯಂಜ್ಞಾನತ್ರಯಂಗಳ ವಿಭೇದಮಂ| ಹಸನಾಗಿಸಿದ್ಧರಾಮೇಶಂಗೆಗುರುಚನ್ನಬಸವಂನಿರೂಪಿಸಿದನು

ಪದ॥ ಶಿವಶಿವವಿಭೂಷಭೂಷಿತಸೋಮಸೋಮಘನ| ಭವಭವವಿನಾಶನಾಶಾಭಾವಭಾವಸಂ| ಭವದಹನದಹನಾನ್ವಿತಾಕ್ಷಾಕ್ಷಪಾದಪ್ರಣತನತಾಂಭೋಧಿಚಂದ್ರ॥ ಪ್ರವಿಮಳಾಕಾರಕಾರಣರೂಪರೂಪಯುತ| ಯುವತಿಯುಧಾರ್ಂಗಗಂಗಾಂಬುಸಂಭೃತಜೂಟ| ಬವಿಜನುತಪಂಪಾವಿರೂಕ್ಷಪಕ್ಷದಿಂರಕ್ಷಿಪುದುನತಜನವನು ॥೧॥ ಇನ್ನಾಲಿಸೈರಾಮನಿನಗನಾಮುಂಪೇಳ್ವೆ| ಸನ್ನುತಸುಧರ್ಮಿಗಳುಸುರಲೋಕಭೋಗಮಂ| ಚನ್ನಾಗಿತೀರಲನುಭವಿಸಿಕರ್ಮಗಳೆಮನಪಟ್ಟಣದನರಕಂಗಳ ॥ ಬನ್ನದಿಂತೀರಲನುಭವಿಸಿಬಳಿಕತಂಡ| ಮುನ್ನಭೋನಿಲವಾರಿಧರೆಗಳೆಂಬೀನಾಲ್ಕು| ಮುನ್ನತಭವದ್ವಾರಮಿವುಮಿವರೊಳೊಂದುಭೂಲೋಕದೊಳುಸಂಜನಿಪರು ॥೨॥ ಸ್ಥಾವರಂಲಕ್ಷಮಿಪ್ಪತ್ತುಬಗೆಯೋನಿಜಲ| ಜೀವಂಗಳೊಂಭತ್ತುಲಕ್ಷಮಾಕ್ರಿಮಿಕುಲಂ| ಭುವಿಸಲುಪನ್ನೊಂದುಲಕ್ಷಮುಂ ಪಕ್ಷಿಗಳುನವಲಕ್ಷ ಭೇದಂಗಳು॥ ಗೋವುಮುಂತಾದಪಶುಜಾತಿತಿಂಶತುಲಕ್ಷ| ನಾವಿಧದನಾಲ್ಕುಲಕ್ಷಂಮನುಜಯೋನಿಯಿಂ| ತೀವಿಭೇದದೊಳೆಚೌರಾಶೀತಿಲಕ್ಷಜೀವಂಗಳಿವುಕೇಳೆಂದನು॥೩॥ ಸ್ವೇದಜಾಂಡೋದ್ಭಿಜಜರಾಯುಜಾಖ್ಯ

ದಚತು ರ್ಭೇದಜನನದೊಳು ದಿಸಿತಜ್ಞಾತಿಧರ್ಮಸಂ| ಪಾದನೆಯ ಪರಿಕರವು ನುಂಡು ತತ್ಕ್ರಿಯಗಳೊಳು ಕಂಗೆಟ್ಟ ಗೋಜನ್ಮಕೆ|| ಆದಿ ಸಂಚಿತದಿನ್ಕೈತಂದು ಬಳಿಕತ್ಯಧಿಕ| ಮಾದನರಜನ್ಮದೊಳಗೈದುವೆಂ ಜೀವನದ| ನಾದರಿಸಿಪೇಳ್ದಪೆಂ ರುತುಕಾಲದೊಳು ದಂಪತಿಗಳೊಂದೆ ಪಿಂಡವಹುದು ||೪|| ಮಾತೆಯರಜಸ್ಸುಪಿತೃವೀರ್ಯಂಗಳೊಂದಾಗಿ| ಸಾತಿಶಯದಿಂಪ್ರಥಮದಿನದಲ್ಲಿ ಕಲಲವುಹು| ದಾತೆರದೊಳೈದುರಾತ್ರಿಗಬೊಬ್ಬುಳಿಕೆಯಾಗಿಹತ್ತನೇದಿವಸದೊಳಗೆ|| ಖ್ಯಾತಿಯಿಂರಕ್ತಬಿಂದಾಚತುರ್ದಶದಿನ| ವ್ರಾತದೊಳು ಮಾಂಸವೆಂದೆನಿಸಿವಿಂಶತಿದಿನ| ಕ್ಕೋತುತನ್ಮಾಂಸವೇಘಟ್ಟಿಗೊಂಬುದು ಸಿದ್ಧರಾಮ ಕೇಳ್ಚರಿಯನು||ಅವಯವಾಂಕುರವಾಗಿತೋರ್ಪುದಿಪ್ಪತ್ತೈದು|ದಿವಸಕಾಮೇಲೆತಿಂಗಳಿಗೆಶಿರವುದಯಿಪುದು| ಸವಡಿತಿಂಗಳಿಗೆತೋಳ್ತೊಡೆಗಳೆಪ್ಪುವುಮೂರು ತಿಂಗಳಿಗ್ವ್ಯಕ್ತಮಾಗಿ|| ತವೆಹಸ್ತಪಾದಸರ್ವಾಂಗುಲಿಗಳೈದೆವು| ಟ್ಟುವವುತಿಂಗಳು ನಾಲ್ಕ ಕಕ್ಷಿನಾಸಾಪುಟ| ಶ್ರವಣಗುದಮೇಢ್ರರೋಮಂಗಳಪ್ಪುವು ಸಿದ್ಧರಾಮೇಶಕೇಳೆಂದನು||೫||ಎಲೆಸಿದ್ಧರಾಮಕೇಳೈದನೆಯ ತಿಂಗಳಿಗೆ ಸಲೆನವದ್ವಾರಜಠರಂಗಳುಂಬುಗುವವು| ತಿಳಿಯೆನಖಕೇಶಮಾರಕೆ ಮೊಳೆವ ವೇಳೆರೊಳಗವಯವಾದಿಗಳೆ ಬಲಿದು || ಇಳಿವುದಾಮಾತೆಯುಂಡಂ ನರಸವುದರುದರ| ದೊಳಗೆತನ್ನಾಭಿಸೂತ್ರದೊಳೆಂಟುತಿಂಗಳಿಗೆ | ನೆಲೆಯುಹುದು ಜಾತಿಸ್ಮರತ್ವವುಂಸುಜ್ಞಾನವಾಶಿಶುವಿಗೇನೆಂಬೆನು ||೭|| ನವಮಾಸದೊಳು ಶಿವಧ್ಯಾನಪರನಾಗಿಸಂ|ಭವಿಸಿದೆಂಭವಭವದೊಳಿಂತು ಗುರುಕರುಣದಿಂ| ಶಿವಪರಾಯಣನಾಗಿಮುಕ್ತನಹೆನೆನುತಿರಲು ಸೂತಿಕಾವಾಯುವಿಂದಂ|| ತವೆಕೆಳಗುದಲೆಯಾಗಿಬೀಳುತಂವಿಷ್ಣುವಾ| ಯುವಿನಿಂದಲಜ್ಞಾನಯುತನಾಗಿಧರೆಗೆದೂ|ರುವಪಾಂಗಿನಿಂತನ್ನದುಷ್ಟುವುಂಚೀರುತಂ ನಡುಗುತಂಜನಿಯಿಸುವುದು ||೮|| ಸತಿರುತುಸ್ನಾತೆಯಾದೊಂದನೆಯದಿವಸದೊಳು|ರತಿಕೇಳಿಯುಂಮಾಡೆಕುಲಗೇಡಿಯಾದಕುವ|ರತಿಯದಿಪಳೆರಡನೆಯದಿವಸದೊಳು ಪಾತಕಂಪುಟ್ಟುವಂಮೂರರಲ್ಲಿ| ಅತಿಚೋರನುದಯಿಪಂ ನಾಲ್ಕನೆಯದಿವಸದೊ| ಳ್ಕೃತಕಿಸಂಜನಿಪನೈದಳೆಬುದ್ಧಿವಂತನಾ|ರ್ರುತುದಿವಸದೊಳುಕೂಡೆವ್ರತಗೇಡಿಜನಿಯಿಸುವನೆಲೆರಾಮಕೇಳೆಂದನು||೯||ಏಳನೆಯದಿನದೊಳುದಯಾಪರನುಮುಂಟುಪಿನ| ಕಾಲಿಸುದರಿದ್ರನೊಂಬತ್ತುಕೆಧನಾಢ್ಯನಾ| ಮೇಲೆಹತ್ತಕೆಕಾಮಿನಿಷ್ಕಾಮಿಪನ್ನೊಂದು ದಿವಸದೊಳು ಪನ್ನೆರಡಕೆ|| ಪೇಳಲೇಂ

ಕೋಪಿಪದಿವಮೂರಕ್ಕಪಂಡಿತಂ। ವ್ಯಾಲೋಲರೋಗಿಪದಿನಾಲ್ಕರೊಳುಪೋದಿನೀ। ಪಾಲಕಂಪದಿನೈದುದಿನಕೆಪದಿನಾರರೊಳು ಶಿವಯೋಗಿಸಂಜನಿಪನು॥೧೦॥ ಭೋಗದೊಳುಸತಿಪುರುಷರೀರ್ವರುಪರಧ್ಯಾನ। ರಾಗಿರಲುಜಾರನುದಿಪಂಶಿವಧ್ಯಾನಪರ। ರಾಗಿರಲು ಶಿವಯೋಗಿಜನಿಸುವಂರವಿಯುದಯಕಾಲದೊಳುಜನಿಸಿದವನು॥ಭೋಗಧಿಪಕೋಪಿಮಧ್ಯಾಹ್ನದೊಳು ಪಾಪಿಸಂ। ಧ್ಯಾಗಮದೊಳು ದಿಪಂಕು ತಾಪಿರಾತ್ರಿಯೊಳುದಿಸಿ। ದಾಗು ಶಾನ್ವಿತನಮಳಶಾಂತಿಯು ತನಾಗುವಂರಾಮೇಶಕೇಳೆಂದನು॥೧೧॥ ಪರಿಕಿಸಸ್ರೈತ್ರಮಂಶೇಷ್ಮಮಂತ್ರಿಳಿಯಲೊಂ। ದೆರಡುಬಳ್ಳಿಂಮಾಂಸ ಖಸೆರಕ್ತಮೇದಸ್ಸು। ಮಲಶುಕ್ಲವಾರ್ಗಂಗೆಸಂದೋಹಮಿಪ್ಪತ್ತುಪತ್ತುಪತ್ತೈದುಮೂರು॥ ಇರದೆಪನ್ನೆರಡುಸಾಸಿರಹಲವಗಣೆಯಿಂ। ನರದೇಹದಿರೋಮತತಿ ಮೂರುವರೆಕೋಟಿ। ನಿರತಮಂನೂರರುವತಸ್ಥಿಗಳ್ಳೇರಿರ್ಪವೆಲೆರಾಮಕೇಳೆಂದನು ॥ ನರರೋಮಶುಕ್ಲಾಸ್ಥಿಗಳುತಂದೆಯಿಂ ಶಂಗ। ಳುರುಚರ್ಮಮಾಂಸರಕ್ತಂಗಳಿವುತಾಯಿಂಶ। ಮಿರದಿವೇಳಂಸಪ್ತಧಾತುಗಳುಶುಕ್ಲಾಧಿಕತ್ವದಿಂಪುರುಷನಹನು॥ ಪರಿಕಿಸಲುರಕ್ತಾಧಿಕತ್ವದಿಂಸ್ತ್ರೀಜನಿಪ । ಳೆರಡುಂಸಮಾನಮಾಗಲು ನಪುಂಸಕನಾಗಿ। ಧರೆಯೊಳುದಯಿಪನೆಂದುಸಿದ್ಧರಾಮೇಶಂಗೆಚನ್ನಬಸವಂಪೇಳ್ದನು ॥೧೩॥ ಪಂಚಭೂತಂಗಳಿಂದಾದವೆಲೆರಾಮಕೇ। ಳ್ಪಂಚವಿಂಶತಿತತ್ವಮಂತೆನಲ್ಜ್ಞಾನಾದಿ। ಪಂಚಕರಣಂಗಳಾಕಾಶದಿಂದಾದವಾಮರುತನಿಂಪ್ರಾಣವಾದಿ॥ ಪಂಚವಾಯುಗಳಾಗವಗ್ನಿಯಿಂಶ್ರೋತ್ರಾದಿ। ಪಂಚಸುಜ್ಞಾನೇಂದ್ರಿಯಂಗಳಾವಾರಿಯಿಂ। ಪಂಚವಿಷಯಂಗಳಾಪೃಥ್ವಿಯಿಂಪಂಚಕರ್ಮಾಖ್ಯಂಗಳುದಯಿಸಿದವು ॥೧೪॥ ಇಂಚಮತ್ತಾರದಿಂಪಿಂಡಬ್ರಹ್ಮಾಂಡಪ್ರ। ಪಂಚಮಂಪೇಳ್ವೆನಾಲಿಸುರಾಮಮುಂಪೇಳ್ದ। ಪಂಚಭೂತಂಗಳೇಪಂಚಾಂಶಪಂಚೀಕೃತಿಯುನೈದಿದೇಹವಾಯ್ತು ॥ ಪಂಚಭೂತಂಧರಣಿಜಲತೇಜಶ್ಶರಿನಭಂ । ಪಂಚಾಂಶಮಸ್ಥಿತೋಕ್ನಾಡಿಮಾಂಸಂರೋಮ। ಸಂಚಯಮಿವೈದುಪ್ರಂಪೃಥ್ವಿಯಿಂದಾದವಾಲಿಸುರಾಮ ನೀನೆಂದನು॥೧೫॥ ಸ್ವೇದಜೊಲ್ಲುಮೂತ್ರಶುಕ್ಲಂಶೋಣಿತಂಜಲದಿ। ನಾದವುತೃಷಾನಿದ್ರೆಯಾಲಸ್ಯಸಂಗಕ್ಷು । ಧಾದವಗ್ನಿಯೊಳಿರದೆಪರಿವಪಾರುವಸುಳಿವಕೂಡುವಗಲೂಪ್ರಾಣವಾಯುವಿಂ॥ ಆದಪ್ರರೆಮೋಹರಾಗದ್ವೇಷಲಜ್ಜೆಭೀ। ತ್ಯಾದಿಗಳುಗಗನದಿಂತತ್ವಂಚಭೂತದಿಂ। ದಾದವಿಪ್ಪತ್ತೈದುಗುಣಮವಕ್ಕೊಂದೊಂದಕ್ಕೈದೈದುಗಣನೆಯಿಂದಂ॥೧೬॥ ಧರೆಗವಿಷ

ಯಂಗಳೈದಂಬುವಿಗೆನಾಲ್ಕಗ್ನಿ । ಗಿರದೆಮೂರನಿಲಂಗವೆರಡಾಗಸ
ಕೊಂದು। ಪರಿಕಿಸಲ್ಕೀಮಿಶ್ರಮಿಪ್ಪತ್ತೈದಕುದು ಪಂಚೀಕೃತಿಯನಿ
ನ್ನಾಲಿಸು॥ ಧರೆಯಾಯುಗಂಧನಾಸಿಕಚರಣಚಿತ್ತಂಗಳುರುತರಪ್ರಾಧಿ
ವಿಪಂಚಕವೈದುಗಸ್ಯರಸ । ಪರಮಜಿಹ್ವಾಪಾಸಬುದ್ಧಿಗಳುವಾರಿ
ಯಿಂದೆಲರಾವು ಕೇಳೆಂದನು ॥೧೮॥ ಪಾದರೂಪಾಕ್ಷಿಗಳುದಾವುನ
ವು ಅಹಂಕಾರ। ಮಾದವಗ್ನಿಯೊಳಿರದೆವಾಣಿಪೆರುಶಬ್ದಕನ್ನ । ಭೇದಿಸ
ಲ್ವಾವ್ಯನವುನವುನಿಲನಿಂವಾಕ್ಕಬುದ್ಧಿಸುತ್ತಿಸಮಾನಸ್ಥಾನವುಂ॥ ಆದ
ವಾಕಾಶದಿಂಶ್ರೋತ್ರೇಂದ್ರಿಯಕಭೂತ। ಮಾದಿವಂದಿಕ್ಕುಗಳುದೇವ
ತೆವಿಷಯುಶಬ್ದ। ಮಾದತದಿನಕ್ಷರಾನಕ್ಷರಂಗಳುಶಬ್ದಭೇದವಾದಪ್ಪು
ದೆಂದನು॥೧೯॥ ಭಾವಿಸಲ್ವಾಕ್ಕಗಮರುದ್ಭೂತಮಿಂದ್ರನಧಿ। ದೇವತೆ
ಯದಕ್ಕೆ ವಿಷಯಂಸ್ಪರ್ಶವ್ಯದುಕಠಿಣ। ಮಾವರಿಪಶೀತೋಷ್ಣವೆಂ
ಬನಾಲ್ಕುಂಸ್ಪರ್ಶಭೇದಮುಕ್ಷೀಂದ್ರಿಯಕ್ಕೆ॥ ಪಾವಕಂಭೂತಮಾರೂ
ಪುವಿಷಯಂಶ್ವೇತ। ಶ್ಯಾಮಾದಿಷಡುವರ್ಣಮಾರೂಪುಭೇದಮಿ। ಸ್ನಾ
ವಿಮುಜಿಹ್ವೇಂದ್ರಿಯಕ್ಕಪ್ಪುಭೂತಮಿದವರುಣನಧಿದೈವಮದಕೆ॥
ರಸವಿಷಯುಮದಕೆಮಾಧುರ್ಯಲವಣಾದಿಷ। ಡ್ರಸಮುತಗ್ಭೇದಮಾ
ಘ್ರಾಣೇಂದ್ರಿಯಕ್ಕರದೆ। ರಸೆಭೂತೆಮಶ್ವಿನೀದೇವತೆಗಳಧಿದೈವಮ
ದಕೆವಿಷಯಂಗಂಧಮ॥ ಸುಗಂಧದುರ್ಗಂಧವೆರಡುಗಂಧದಭೇದ।
ಮುಸಮುನಾಗಿಂದ್ರಿಯಕೆಸಾಗಮಗತಂವಾಣಿ। ರಸವದ್ಯೆವಂಸುವಾ
ಕ್ಯಂಗಳುಂದುವರ್ಣಕ್ಯಸಂಕುಲಂವಿಷಯಂಗಳು॥೨೦॥ ಬರವೆನಾತಿಸು
ರಾಮುಪಾಣೇಂದ್ರಿಯಕೆಕೂರ್ಮ। ಮುದುತನಿಂದ್ರಂಗೈವಮುಮುದಾ
ನದಾನವೆಂ। ಬೆರಡುವಿಷಯಂಪದೇಂದ್ರಿಯಕೆಕೃಕರಂವಾಯುವಿ
ಷ್ಣುವಧಿದೈವಮದಕೆ॥ ಇಂದೆಗಮನಾಗಮನವಿಷಯಮಾಗುಸ್ಯಕ್ಕೆ।
ವರದೇವದತ್ತಮರುತಂಮೃತ್ಯುವಧಿದೇವಿ। ಪರಿಕಿಸಲ್ಭಾನಂದವಿಷ
ಯುಮಾಪಾಯುಗಸನಂಜಯಮಾಸ್ರುಂಮರುತನು ॥೨೧॥ ಪರಮೇಷ್ಠಿ
ದೈವಂವಿಸರ್ಜನಂವಿಷಯುಮಿ। ಸ್ನಿದದೆಕೇಳ್ದಶವಾಯುನಿರ್ಣಯಂಗ
ಳಂ। ಪರಿಕಿಸಲ್ಪ್ರಾಣಮರುದಿಂದ್ರನೀಲದವರ್ಣಮದುಹೃದಯದೊ
ಳನೆನೆಲಸಿ॥ ಹರಿಯುಬೆರಳಿಂಗಪಾಲಾಗ್ರಸರಿಯಂತರಂ । ಸ್ಥಿರದೆಸ
ತಾಪ್ರಾಣಸುತಮಶ್ವಾಸನಿಶ್ವಾಸ । ವೆರಡನಾಗಿಸಿಯನ್ನಪೀರ್ಣ
ಮಂಮಾಡುವುದುರಾಮನೀಂಕೇಳೆಂದನು ॥೨೨॥ ಗುದದೊಳಗಪಾ
ನಹರಿಯೆದುರ್ವಮಲಮೂತ್ರಮುಮು। ನೊದವಲೀಯದೆವಿಸರ್ಜಿಸಿ
ಯಧೋದ್ವಾರಮಂ। ಪದೆದುಬಲಿದಂನರಸಮಂವ್ಯಾಪ್ತಿಯಂಮಾಡು

ತ್ರಿಶುದನುದಿನಂಮುರಿಯದೆ॥ ವಿದಿತಂಸಮಾನಾನಿಲಂನೀಲವರ್ಣವಿ।
ಪರ್ದುನಾಭಿಯಾಪಾದಮುಸ್ತಕಂಬರಮುಮಯು। ವದೊಳೆಪಸರಿಸಿ
ಕೊಂಡುಕೊಂಡಂನರಸವನೆಲ್ಲಾಗೋಮುಕ್ಕೈದಿಸುವುದು॥೧೩॥ ಎಳೆ
ಮಿಂಚುವಣ್ಣದೊಳುದಾನಾನಿಲಂಕಂಠ ದೊಳಗಿರ್ದುಸೀನ್ಕಂಮುಳ
ನಸುಗಳ್ಕಾಂಬವೈ। ವಳಿಯೊಳೇಳಿಪಕುಳ್ಳಿರಿಪೆಛರ್ದಿಯುಂನಿರೋ
ಧಂಗಳಂಮಾಡಿಸುತ್ತ॥ ಇಳಿವನ್ನರಸವನುತ್ತಾಪಸಂಗೈವುತ್ತ। ನೆಲಸಿ
ಪ್ಪುದಾವ್ಯಾನವಾಯುಕೀರದಬಣ್ಣ। ಮೊಲವಿನಿಂಸರ್ವಾಂಗಸಂಧಿಗ
ಳೊಳಿಪ್ಪುರ್ದೆಲೆರಾಮನೀಂಕೇಳೆಂದನು॥೧೪॥ ಮುದುಡಿದಿರ್ದಂತಿದ್ದಿ
ಯನ್ನಪಾನಾದಿಗಳ। ನೊದವಿಸುವಗಲ್ಲಲ್ಲಿಮೋಣ್ಣಾಗವಾಯುವಂ।
ಬುದುಪೀತವರ್ಣಮುರೆ ರೋಮನಾಳದೊಳಿರ್ದ್ದುನಿಶ್ಚಲದೆಪಾಡಿಸು
ವುದು॥ ಉಗರಭಾಳದೊಳಿರ್ದ್ದಕೂರ್ಮಮರುತಂಸುಧವೆ। ಲದವರ್ಣ
ತನುವಿಗಾಧಾರವಾಗಿರ್ದ್ದಪುದು। ಪದೆದುಕಣ್ಣ್ಬಯ್ಗಳಂಮುಚ್ಚಿತೆರೆ
ಸುತ್ತಿಹುದುಕೇಳೆಂದುನಿರವಿಸಿದನು॥೧೫॥ ಕೃಕರವೆಂಬಾವಾಯುವಂ
ಜನದಕಾಂತಿಸಾ॥ ಸಿಕದುದಿಯೊಳಿರ್ದುಂಕ್ಷುಧಾದಿಧರ್ಮಂಗಳುಂ।
ಪ್ರಕಟಿಸುತಗಮನಾಗಮನಕಾರ್ಯಮುಂಮೂಡುವುದುದೇವದತ್ತ
ವಾಯು॥ ವಿಕಲವಿಲ್ಲದೆಗುಹ್ಯಕಟದೇಶದೊಳಗೆಸ್ಫಟಕವರ್ಣದಿಂದಿ
ರ್ದುಕುಳ್ಳಿರ್ದುಕುಳ್ಳಿರಿಸುವೇಳಿಸುವ। ಸಕಲಘಟಂಗೈವುತೊರಲಿ
ಮಾತಾಡಿಸುವುದೆಲೆರಾಮಕೇಳೆಂದನು॥೧೬॥ ಮರ್ಧನಂಜಯುವಾ
ಯುಬೊಮ್ಮರಂಧ್ರದೊಳಿಪ್ಪುರ್। ದುರುನೀಲವರ್ಣಮುದುಕರ್ಣಂಗ
ಳೊಳುಬಿಡದೆ। ಶರಧಿಘೋಷಂಗಳೊಲುಘೋಷಿಸುತಮುರಣಗಾಲ
ಕ್ಕನಿಘೋರ್ಷವಾಗಿ॥ ಇರುತಿರ್ಪ್ಪಗೆಲೆಸಿದ್ಧರಾಮದಶವಾಯುಗ
ಳ। ಪರಿಯುವಿನ್ನಾಲ್ಕಿಸ್ಸೈಮುಂಬಿರದೆಪೇಳ್ದಪಂ। ಕರಣಭೇದಂಗಳಂ
ವಿಸ್ತರದೊಳೆನುತಲಾಚನ್ನಬಸವಂನುಡಿದನು॥೧೭॥ ಮತ್ತೆಕೇಳಾ
ತ್ಮನಾಗಸಮೊಂದೆಜಾನಮಾ। ದತ್ತುವಾಯುವನೊಂದೆಮನಮಾ
ದುದಗ್ನಿಯೊಳು। ಬಿತ್ತರದಿನೊಂದಲ್ಕಹಂಕಾರಮಾಯ್ತುಗಕಮಂ
ಕೂಡೆಬುದ್ಧಿಯಾಯ್ತು॥ ಚಿತ್ತಮಾಯ್ತುಭೂಮಿಯೊಳ್ಬೆರಸೆಮೋ
ಣವಿನಿ। ತುತ್ತವಜ್ಞಾನಾದಿಯಂತಃಕರಣಮಾಳಿ। ಸುತ್ತರಮನಾ ಮ
ನಪ್ಪಿಗೆವಾಯುಭೂತಮಾಚಂದ್ರನಧಿದೈವಮುದಕೆ॥೧೮॥ ಸತತಮು
ದುಸಂಕಲ್ಪಮುಂವಿಕಲ್ಪಂಗಳಂ ಪ್ರತಿದಿನಂಮಾಡುವುದಹಂಕೃತಿಗೆರು
ದ್ರದೇವತೆಯಗ್ನಿಭೂತಮೊ ಡನೊಡನೆಹಂಕರಿಸುತಿಪ್ಪುದುಬುದ್ಧಿ
ಗಪ್ಪುಭೂತಂ॥ ಚತುರಾನಂದೈವಬುದ್ಧಿಯಂನಿಶ್ಚಯಿಪ್ಪುದತುಳಚಿತ್ತ

ಕೆಪೃಥ್ವಿಯೆಂಬಭೂತಮುಮಾತ್ಮ| ವಿತತಿದ್ವೈಪಂಸ್ಥಿರದೊಳವಧರಿಸು
ತಿರ್ಪುದೆಲೆರಾಮೋಳಕೇಳೆಂದನು ||೧೯|| ಇಂತುಟಪತ್ತನಾಲಕುತ
ತ್ವಮೋದೇಹ| ಮುಂತದಂತಾಳ್ದಿರ್ಪುದೇಹಿಯಾತ್ಮಂತನಗೆ| ಸಂತತಂ
ಜ್ಞಾನೇಂದ್ರಿಯಂಗಳುಚಿದಾಕಾರಮುಧಿದ್ಯೈವಮದಕೀಶನು|| ಸಂತಸ
ದೊಳಖಿಳಸರ್ವಾಂಗಪ್ರದೇಶವಶಮಂ | ತಾಂತುಂಬಿಕೊಂಡು ಚೈತ
ನ್ಯರೂಪಾಗಿಸ | ತ್ಕಾಂತಿಯುಮನ್ಯೈಟಿಸುತ್ತಿರ್ಪನಾತ್ಮಂ ಮೂರು
ಭೇದಮಾಗಿರ್ಪುದೆಂದನು ||೨೦|| ಪರಿಕಿಸಲು ಜೀವಾತ್ಮನಂತರಾತ್ಮಂ
ಬಳಿಕ| ಪರಮಾತ್ಮನೆಂದು ಸಂಸಾರಸುಖದೊಳು | ಪರಿಬದ್ಧನಾದ
ವಂಜೀವಾತ್ಮನವರೊಳಗೆಸಲೆಹೊದ್ದಿಯುಂಹೊದ್ದದೆ || ಇರುತಿರ್ಪ
ನಂತರಾತ್ಮಂತತ್ಪ್ರಪಂಚದೊಳು | ಭರದೆಸಿಲ್ಕದೆನಿರಾಕಾರರೂಪಿ
ನೊಳಿಹಂಪರಮಾತ್ಮನಿಂತುಟಾತ್ಮತ್ರಯದನಿರ್ಣಯಂಕೇಳೆಂದುನಿ
ರವಿಸಿದನು||೨೧|| ಪ್ರಿಯದಿಪೇಳ್ವೆಂಸ್ಥೂಲಸೂಕ್ಷ್ಮಕಾರಣತನು| ತ್ರ
ಯದೊಳಾಸ್ಥೂಲತನುವೇಪಂಚಭೂತಗಳ| ಮಯವಿಂಪ್ರಿಯಂಗಳೀ
ರೈದುವಾಯುಗಳೈದುತನ್ಮನೋಬುದ್ಧಿಯೆರಡು || ನಿಯತಮಿಾಸ
ಪ್ತದಶಕಂಲಿಂಗಭೌತಿಕಾಂ| ಸ್ವಯಮಿದೇಸೂಕ್ಷ್ಮತನುವಾತ್ಮಚಿ
ತ್ತಾಹಂಕೃ|ತಿಯುಮಿರದೆಸಂಯೋಗಮಾಗಕಾರಣತನುತ್ರಯಮಿವಿ
ವರಿಹೇಗೆಂದನು ||೨೨|| ಎಸವಂಗಪ್ರತ್ಯಂಗಸಾಂಗಾಂಗಸಮುಪಾಂಗ|
ವಿಸರಭೇದಂಗಳುಶಿರೋವಕ್ಷಮೂರುಭುಜ| ಮುಸಮಾಂಗಮಾನನಂ
ನಾಸಿಕಂ ಶ್ರುತಿಯಧರಲೋಚನಸಾಂಗುಲಿಯೆಂಬಿವು || ಸಸಿನಟಿಂಪ್ರ
ತ್ಯಂಗಮಿಂತುಸಾಂಗಾಂಗಭಾ|ವಿಸೆನಾಲ್ಕುಕರಣವಸ್ತ್ರಾಭರಣಲೇಪ
ಕಾ | ರಸಿತತಿಯುಪಾಂಗಮಿಂತಂಗದಚತುಷ್ಟಯಂದಶನಾಡಿಯುಂ
ಪೇಳ್ವೆನು||೨೩|| ಮೇಲೆನಿಸುವೀಡಪಿಂಗಳನಾಡಿಗಳುಚಂದ್ರ| ನಾಳ
ದೊಳಗಾಸೂರ್ಯನೊಳುಸುಷುಮ್ನಂಮಧ್ಯ| ನಾಳದೊಳುಗಾಂ
ಧಾರಿಬಲದಕ್ಷಿಯೊಳುಹಸ್ತಿಜಿಹ್ವೆಯೆಡದಕ್ಷಿಯೊಳಗೆ|| ಲೀಲೆಯಿಂದೆಡ
ಬಲದಕಿವಿಯೊಳುಪಯಸ್ವಿನಿವಿ| ಶಾಲಪೂಷಂಗಳಾಲಂಬುಮಿರ್ಪು
ದುಮೇಢ್ರ| ನಾಳದೊಳುಪಾಯುವೊಳುಲಕುಹಮಾಶಂಕಿನಿಯೆನಾ
ಭಿನಾಳದೊಳಿರ್ಪುದು ||೨೪|| ಧರೆಸಲಿಲಪಾವಕಾನಿಲಗಗನರವಿನಿ
ಶಾಕರ| ರಾತ್ಮರೆಯಷ್ಟಮೂರ್ತಿಗಳೆಮದವಿವಾ| ಧರೆಯುಮದವೆತ್ತೆ
ನುತಗುಣಭರಿತನಾಗಿಹಂಸಲಿಲಮದವೆತ್ತಿದಲ್ಲಿ || ಇರದೆಸಂಸಾರಮ
ದನಾಗಿಹಂಶಿಖಿಮದೋ| ತ್ಕರಮಾಗೆಕಾಮಮದನಾಗಿಹಂಪವನಮ
ದ| ಭರಿತನಾಗಲುಗಮನಭಳನಹಂಗಗನಮದಕೇರುವಂವಾಹನವ

ನು॥೩೫॥ ತರಣಿಮುದವೆತ್ತೆ ಕೋಪಾಗ್ನಿಯೊಳ್ ಪುಗಿದಿಹಂ, ಪರಮ
ಶಶಿಮುದವೆತ್ತೆ ಚಿಂತೆಯೊಳ್ ಕೂಡಿರ್ಪ । ನಿಂದಾತ್ಮ ಮುದವೆತ್ತೆ ಬಳಿ
ಕಹಂಕಾರಯುತನಾಗುವಂ ಕೇಳ್ವುದಿನ್ನು ॥ ನಿರುತಮಾಸಪ್ತಧಾ
ತುತ್ವತ್ವವರ್ಣಾಂಶ, ದುರುತರದ ಕರ್ಮಂಗಳಿಂತೆನಲು ರಸಕೆ ಭಾ।
ಸುರಕಪಿಲವರ್ಣಮುಂ ಪೃಥ್ವ್ಯಂಶಮುಂ ಗಮುಂ ಭರದಿನಿಳ್ಕಿಸುತಿರ್ಪು
ದು ॥೩೬॥ ತವೆ ರುಧಿರಮುಗು ನೀಲವರ್ಣಮುಪ್ಪುವಿನಂಶ, ಮುಮಯು
ವಮುನಡುಗಿಸುತ್ತಿಹುದು ಮಾಸಂ ರಕ್ತ । ನಿವಹವರ್ಣಮುಮಗ್ನಿ
ಯಂಶಂ ಶರೀರಮಂ ಕಳೆವಳಿಸುತಿರುತಿರ್ಪುದು ॥ ವಿವರಿಸಲು ಮೇದ
ಸ್ಸಿಮಾಂಜಿಷ್ಠವರ್ಣಮುಗು । ಪವನಾಂಶಮುಂ ಗಮುಂ ಚೆದರಿಸುತ್ತಿಹು
ದು ಮೇ। ಲವಿರಳಾಸ್ಥಿಗಳ್ಮೈದೆ ಕೃಷ್ಣವರ್ಣಂಗಗನದಂಶಮಾಗಿರುತಿರ್ಪು
ದು ॥೩೭॥ ಮರುಳಾಗಿನುಡಿಯುಪುದು ಮಜ್ಜೆತಾಂ ವ್ರಿಚಿತ್ರಾಯೆ। ತ
ರಣಿಯಂಶಂ ಶರೀರವನೊತ್ತರದೊಳಿಕನ । ಮರಿಸಿನುಡಿಸುತ್ತಿಹು
ದು ಶುಕ್ಲಮೇಶ್ವೇತವರ್ಣಂ ಚಂದ್ರಸಂಶಿಕಮುದುಂ॥ ಇಂದೆ ಕಳೆವಳಮು
ಮುಂ ಕಂಪನಮುನೆಸಗುತ್ತೀ। ಪರಿಸಪ್ತಧಾತುಗಳ ನಿರ್ಣಯಂ ತೆನುಮ
ನಂ । ವರಧರಂ ರಾಜ್ಯಪಿಶೋಷ್ಟೀತ್ರಾಪಸೇವಕಾಟಗಳಿ ಪೇಸ್ವ್ಯಸನಂಗ
ಳ್ ॥೩೮॥ ತನುವಿ ವ್ಯಸನಮಾದಲ್ಲಿ ತನುಬಡನಾಯಿ । ತೆನುತಿಹಂ
ಮೋಣ್ತ್ರನೋವ್ಯಸನಮಾದಲ್ಲಿಯೊ । ಯ್ಯಾಸೆಕಳೆವು ಪಾದರಂಗಳಬ
ಯುಸುತಿರ್ಪನರ್ಥವ್ಯಸನಮಾಗಳ್ ॥ ಧನಕೆ ಚಿಂತಿಸುತಿಹಂ ರಾ
ಜ್ಯವ್ಯಸನಮಾಗ, ವಿನುತವಸ್ತ್ರಾಭರಣವಾಹನಂಗಳ ಬಯಸ । ನ
ನುಮಿತಂ ವಿಶ್ವವ್ಯಸನಮಾಗ ಸಗ್ರಾಹ ಕ್ಷೇತ್ರಮಂ ಬಯಸುತಿಹನು॥
ಆಕ್ರಸುತ್ರಾಹವ್ಯಸನಮಾಗ ಪುತ್ರನು । ತ್ರಾಳಿಯಂ ಬಯಸುವಂ ಸೇ
ವಕಾವ್ಯಸನಮಂ, ತಾಳೆಕ್ಕೊಂಡು ಕೊಟ್ಟಂಡು ಡಬ್ಬೇಕೆಂಬ ಕೋ
ಟಲೆಯೊಳೊಂದಿರ್ಪನು॥ ಸೇಳತಿ ವೃಸಪ್ತವ್ಯಸನಗಳ್ ಷಡೂರ್ಮಿಗಳ್,
ಕೇಳಾದೊಡಾ ಕ್ಷುತ್ಪಿಪಾಂಸೆಶೋಕಂ ಮೋಹ, ಮಾಲೋಕಿಸಲು ಜನ
ನಮರಣಾದಿಗಳ್ ಕ್ಷುತ್ಪಿಪಾಸೆಗಳ್ ಪ್ರಾಣಧರ್ಮಂ॥೪೦॥ ವರಮೋಹಶೋ
ಕಂಮನೋಧರ್ಮಮುಂ ಜನನ । ಮರಣಮರಡುಂದೇಹಧರ್ಮ ಕಾಮ
ಕ್ರೋಧಮುರುಲೋಭಮೋಹಮುದ ಮತ್ಸರಂಗಳ್ ತಿಳಿಯಲಾರುವ
ರಿವರ್ಗಂಗಳ್॥ ಪಂಕಿಸಲು ಜಾತಿವರವರ್ಣಕುಲಗೋತ್ರಂಗ। ಳೊ
ರವೆ ನಾಶ್ರಮನಾಮ ಮಿವು ಬಗೆಯ ಷಡ್ಭ್ರಮೆಂಗ । ಳಿರದೆ ಜಾಯತೆ
ವಿಪಕ್ಷತೆ ವಿನಶ್ಯತೆ ವಿಪರಿಣಮತೆ ವರ್ಧತೆ ಯಸ್ತಿತೆ॥೪೧॥ ಇವು ತಿಳಿಯೆ
ಷಡ್ಭವವಿಕೃತಿಗಳ್ ಜಾಯತೆಯೆ । ತವೆ ಜನನಿಯುದರದಿಂ ಬಪ್ಪು

ದಸ್ಥಿತೆಯುಂಟೆ । ನುವಪರಿಣಮತೆ ಪರಿಣಮಿಸುವುದುಂ ವರ್ಧನತೆಯು
ಬಳೆವಪಕ್ಷತೆಯುಕುಸಿವಂ॥ ಸವಿನಶ್ಯತೆಯುಕೆಡುವುದಿಂತಿವೇ ಷಡ್ಭಾ
ವ । ವಿವರಂಗಳಂ ನವಮಯ ಪರಿಣಮಯ ವಿಜ್ಞಾನ । ನಿವಹವಾನಂದ
ಮಯಮುಂ ಮನೋಮಯಮಿಂತು ಪಂಚಕೋಶಂಗಳಿರವು॥ ಒರವೆ
ನಾಂ ಸುಗುಣತ್ರಯದಭೇದಂಗಳಂ । ವರಸತ್ವಹರುಷಕ್ಷಮಾಕುಲ
ಜ್ಞಾನಭಾ। ಸುರವಮಾನನಿಷ್ಠೆಯಂ ಶ್ರದ್ಧೆ ಧೈರ್ಯವಿವೇಕಸಹಸಗಳು ಸಾ
ತ್ವಿಕಗುಣಂ॥ ಪರಮಪ್ರಿಯಾಸಂಕೃತೋದ್ಯೋಗರೋಷಮು। ತಸ್ಕರ
ಮಿವು ರಜೋಗುಣಂ ತವೆ ನಿದ್ರೆಯಾಲಸ್ಯ। ಮುರುಮೋಹಚಪಲಹಿಂ
ಸಾನಿಂದೆಯುಂ ಬಿವೇತಾಮಸಗುಣಂ ತಿಳಿಯಲು ॥೪೩॥ ಅನುಪಮದ
ಸಸಿವಂತ್ರಣೀಕೃತಂ ತಿಳಿಯೆವ। ಶ್ರೀನಿಮಹಾಕ್ರೋಧಿನಿ ಸಗಂಧಚಾ
ರಿಣಿವಿಮೋ । ಹಣಿಯು ಮತ್ಚರಿಣಿಯುಮುಸೆವಾಸಿನಿಯುಂತರಂ
ಗದಮದಾಷ್ಟಕಮಿವು॥ ಧನಮದಂಕುಲಮದಂ ಛಲಮದಂ ಚಾರುಯ
ವ್ವನಮದಂ ರೂಪವಿದ್ಯಾರಾಜ್ಯಸತ್ವ್ರೋ। ಘನಮದಾಷ್ಟಕಮಿವೆ ಬಾ
ಹ್ಯಮದಸಂಕುಲಂ ಕೇಳೆಂದು ನಿರವಿಸಿದನು ॥೪೪॥ ಒರವೆನೆಲ್ಲರಾಮ
ನೀಂ ಕೇಳ್ವುದಧ್ಯಾತ್ಮಿಕಮುಂ। ನಿರದಾಧಿಭೌತಿಕಮುಂ ನಾದಿದೈವಿಕ
ಮುಮಿನ್ನೆ। ಪರಿಕಿಸಲು ತಾಪತ್ರಯಂಗಳಧ್ಯಾತ್ಮಿಕಮದೆರಡುತೆರ
ನೆಂತೆಂದೊಡೆ॥ ನಿರುತದಿಂ ಮಾನಸಂ ಶಾರೀರವೆಂದುಮು। ಕ್ಷುದೆಸೂ
ಯಾಸೂಯ ಚಿಂತೆಯುಂ ಮಾನಸವಿ । ಕರಮೆ ಮಾನಸಮಿನ್ನು ಘೋರ
ಮುಖ್ಯರೋಗದಿಂ ನೋವುದೆ ಶಾರೀರಮ ॥೪೫॥ ಚೋರರಿಂ ರಾಜರಿಂ
ಪಶುಪಕ್ಷಿಮೃಗಗಳಿಂ। ಕ್ರೂರಾಹಿಭೂತಭೇತಾಳಾದಿಸಂಕುಲದ। ಸೇ
ರುವೆಯು ಜೀವಚಯದಿಂದಲಾದ ಪಸತಿಗಳಾಧಿಭೌತಿಕಮದಿನ್ನು॥
ಸೇರುವೆಯು ಜನನಮರಣಂ ಕ್ಷುತ್ತೃಷೆಗಳಿಂ। ದಾರೈಸೆ ನರೆತೆರೆಗಳ
ಜ್ಞಾತಮಿವರಿಂದೆ। ಸೇರಿದಮಹಾದುಃಖಮಾಧಿದೈವಿಕಮಿದೆಲ್ಲರಾವೋ
ಶಕೇಳೆಂದನು ॥೪೬॥ ಇಂತು ಭವಭವದೊಳುದ್ಭವಿಸಿತಾಪತ್ರಯ।
ಭ್ರಾಂತಿಯೊಳು ಕಡುನೊಂದ ಜೀವಂಗ ಬಿಡದೆಜ। ನ್ಮಾಂತರದ ಸುಕೃ
ತವಾಸನೆವಿಡಿದು ಶಿವಭಕ್ತಿಸಂಜನಿಸಲದರಿಂದಲೆ ॥ ಮುಂತೆ ಸುಜ್ಞಾನ
ವೊದಗುವುದು ತಜ್ಞಾನದರ । ವೆಂತೆನಲು ಮೂರುತೆರನದ ಭೇದಂಗ
ಳಂ । ನೀಂ ತಿಳಿವುದೆಂದು ದಯದಿಂ ಸಿದ್ಧರಾಮಂಗ ಚನ್ನಬಸವಂ ಪೇ
ಳ್ದನು ॥೪೭॥ ಹಿಂಗದೀ ಪ್ರತ್ಯಕ್ಷಮುಂ ಪರೋಕ್ಷಾಪರೋ। ಕ್ಷಂಗಳಿಂ
ಬರುತರಜ್ಞಾನತ್ರಯಂ ನೋಡೆ । ಕಂಗೊಳಿಸುವೀತನುತ್ರಯದೊ
ಳಂ ಶ್ರೋತ್ರಾದಿಜ್ಞಾನತ್ರಯಂಗಳಿಂದಂ॥ ತುಂಗಶಬ್ದಾದಿವಿಷಯಂಗಳಿಂ

ಜ್ಞಾನಾದಿ। ಪೊಂಗುವಂತಃಕರಣವೃತ್ಯದರಿಂದರಿವುದೇ। ಕಂಗೊಳಿಸು
ವಮಲಪತ್ಯಕ್ಷಮಾಲಿಸು ಸಿದ್ಧರಾಮೇಶನೀನೆಂದನು ॥೪೮॥ ಪರದೇ
ಶಕಾಲಮುಂ ಲೋಕಾಂತರಂಗಳೆಂ। ಪರಮಜನ್ಮಾಂತರದಸುಖದುಃ
ಖದುಷ್ಕರ್ಮ। ಮರುಸುಕರ್ಮದಬಂಧಮೋಕ್ಷಂಗಳೆಂಬಿವಂವೇ
ದಾಗಮಂಗಳಿಂದಂ ॥ ಇರದರಿವುದೇ ಪರೋಕ್ಷಂ ಬಾಹಿರಂಗದ। ಲ್ಲಿರು
ತಿರ್ಪಭೂತಪಂಚಕಮಂತರಂಗದ। ಲ್ಲಿರುತಿರ್ಪಸೂಕ್ಷ್ಮಗಳೊಂದೆಂ
ದರಿದು ಸಿದ್ಧರಾಮೇಶ ಕೇಳೆಂದನು ॥೪೯॥ ಮುಂದೆ ತದ್ಗುಣಧರ್ಮವಿ
ಷಯಮಂತಾನಲ್ಲ। ವೆಂದರಿದು ಜೀವಾತ್ಮಪರಮಾತ್ಮರೇಕಾರ್ಥ।
ವೆಂದು ನಿಶ್ಚೈಸಿ ಮಿಗೆ ತನ್ನ ನಿಜಮೆಂದರಿದು ಸಿರಿಗುರು ಕಟಾಕ್ಷದಿಂದಂ॥
ಸಂದೇಹವಿಲ್ಲದರಿವಂದಮಪರೋಕ್ಷವಾ। ಸಂದಸಂವಿತ್ರಯಮಿವೀ
ಗೆಂದು ಪೇಳಲಾ। ನಂದದಿಂ ಸಿದ್ಧರಾಮಂ ಚನ್ನಬಸವನಡಿಗೆರಗಿ ಮಿಗೆ ಗು
ಳಿಂತೆಂದನು ॥೫೦॥ ಇಂತೆಸವಚನ್ನಬಸವೇಶ್ವರಪುರಾಣಮಂ। ಸಂತಸ
ದಿ ಬರದವರ್ಗೋದಿದರ್ಗದ್ಧವಾ। ದ್ಯಂತಮಂಬಿಡದೆ ಪೇಳ್ದರ್ಗೆ ಪರಿಸಿದವ
ರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸುಖಮಂ ಸಕಲಭೋಗವ
ನ। ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ। ಕಂತುಹರನಪರಾವ
ತಾರನೆನಿಸುವ ಚನ್ನಬಸವೇಶನಕ್ಕರಿಂದಂ ... ॥೫೧॥

ಐದನೆಯ ಕಾಂಡದಲ್ಲಿ ೫ನೇ ಸಂಧಿ ಮುಗಿದುದು
ಅಂತು ಸಂಧಿ ೫೮ಕ್ಕಂ ಪದ ೨೫೮೩ಕ್ಕಂ ಮಂಗಳ.

## ೬ನೇ ಸಂಧಿ

ಸೂಚನೆ॥ ಮೋಕ್ಷಮಂ ಕೊಟ್ಟೆನ್ನ ಸಿದ್ಧರಾಮೇಶನಂ। ರಕ್ಷಿಸು
ವೆನೆನುತಾಗ ಚೆನ್ನಬಸವಂ ಲಿಂಗ। ದೀಕ್ಷೆಯಂ ಮಾಡಿ ಗುರುಲಿಂಗ
ಜಂಗಮದ ಮಾಹಾತ್ಮೆಯಂ ವಿರಚಿಸಿದನು॥

ಪದ ॥ ದೇವ ಜಯ ಜಯ ಶಾರ್ವರೀಶ್ವರಕಲಾಜೂಟ। ದೇವ ಜಯ
ಜಯ ಮನ್ಮಥಪ್ರಮೋದವಿದೂರ। ದೇವ ಜಯ ಜಯ ವಿಭವವಿಕ್ರಮಾ
ನ್ವಿತ ದೇವರಾಕ್ಷಸವಿಮುದವಿದೂರ॥ ದೇವ ಜಯ ಜಯ ಶುಕ್ಲಧಾತುವಿ
ಲಸದ್ಗಾತ್ರ। ದೇವ ಜಯ ಜಯ ನಂದನಶ್ರೀಮುಖಾಂಭೋಜ। ದೇವ ಜ
ಯ ಜಯ ಪಭವತಾರಣ ಶರಣ ವಿರೂಪಾಕ್ಷಕಾಲಸ್ವರೂಪ ॥೧॥ ಎನ್ನ
ಸದ್ಗುರು ಚೆನ್ನಬಸವೇಶ ಪೇಳ್ವುದೆನ। ಗಿನ್ನೇನುಗತಿಯೆನಲು ಶೈವಾ
ಗಮಾರ್ಥಸಂ। ಪನ್ನರಾಗಿರ್ಪ ವರಗುರುಕರುಣದಿಂದಲಷ್ಟಾವರಣದರ
ವನರಿದು॥ ಚೆನ್ನಾಗಿ ವೀರಶೈವೋಪದೇಶಂಬಡೆದು। ನಿನ್ನ ಭವವಂ
ತೊಲಗಿಸೆನೆ ನೀನೆ ಗುರುವಲ್ಲ। ದಿಂನೆನಗೆ ಬೇರೆ ಗುರುವಿಲ್ಲ ಕರುಣಿಪುದೆಂ

ದುಮುಗುಳೆರ್ದಗಲಿಂತೆಂದನು||೨|| ಒರವೆನಾಲಿಸು ರಾಮ ಗುರುವಿನ ಸು
ಲಕ್ಷಣಮಂ। ನುರುಶಿವಾಗಮ ಪುರಾಣಂಗಳಂತಿಳಿದಮಳ । ಪರಮ ಶಾಂ
ತಂ ಶುಚಿ ಶಿವಾಚಾರಸಂಪನ್ನನುತ್ತಮಂ ಪೂರ್ಣಾಂಗನು || ವರಜಿತೇಂ
ದ್ರಿಯನತುಳಗುರುಸಂಪ್ರದಾಯಕಂ। ನಿರುಪಮಿತಸದ್ವಂಶಜಾತಂ ಶಿ
ವಧ್ಯಾನ। ಪರರಾದರಲ್ಲಿ ನೀಂ ದೀಕ್ಷೆಯಂ ಮಾಡಿಕೊಳ್ಳೆನಲಾತನಿಂತೆಂ
ದನು ||೩|| ಪರಮಸದ್ಗುರು ಚೆನ್ನಬಸವೇಶ ನೀಂ ಪೇಳ್ದ। ವರಲಕ್ಷಣಂ
ಗಳೆಲ್ಲಂ ನಿನ್ನೊಳಿವೆ ನೀನೆ । ಪರಶಿವ ಸಚಿತ್ಕಳಾರೂಪ ನೀ ಬಸವಣ್ಣ
ಮೊದಲಾದ ಪಮಥಗಣಕೆ ॥ ವಿರಚಿಸಿದೆ ಪರಣಲಿಂಗೋಪದೇಶವ
ನೆನಗೆ । ಕರುಣದಿಂ ದೀಕ್ಷೆಯಂ ಮಾಡಿ ಭವಪಾಶಮಂ । ಪರಿಹರಿಸಿ
ರಕ್ಷಿಸೆನೆ ಚೆನ್ನಬಸವೇಶ್ವರಂ ಕರುಣದಿಂದಿಂತೆಂದನು||೪|| ಎಲೆ ಸಿದ್ಧರಾ
ಮ ಕೇಳ್ವೀರಶೈವಂ ನಿನಗೆ। ಸುಲಭವೇ ಖಡ್ಗಧಾರೆಯ ಮಹಾಮಧು
ಘಣಿಯ । ತಲೆಯ ಮಾಣಿಕವಿಮಾರ್ಗಳ ವಸುದು ಬಸಳ ಧೀರೋದ್ಧಾ
ರಣಂಗಳಲ್ಲದೆ ॥ ಸಲೆ ಮಲತ್ರಯ ಪಂಚಸೂತಕಾಟಗಳನತಿ । ಗಳಪ
ನ್ಯದೈವಭವಿನಾಸ್ತಿಯಾಗಿರುತನಿ । ಮರ್ಗಲದ ಪಂಚಾಚಾರದಿಂ ನಡೆ
ಯಬೇಕೆನಲ್ಕವನೆನಗೆ ತಿಳಿಪೆಂದನು||೫|| ಇನ್ನಾಲಿಸೈ ಸಿದ್ಧರಾಮ
ತ್ರಿಮಲದಿರವ । ನೆನ್ನ ಪಿತೃ ಮಾತೃ ಸುತರೆಂಬುದಾಣವಮಲಮು।ದು
ನ್ನ ತದ ಕುಲಗೋತ್ರವೆಂದೆನಲು ಮಾಯಾಮಲಂ ಧನಂ ಕಾರ್ಮಿಕ
ಮಲಂ॥ ಮೂನ್ನಿವಂ ಬಿಡಬೇಕದೆಂತೆನಲು ಶಿವಶಿವೆಯ। ರೆನ್ನ ಪಿತೃ ಮಾ
ತೃಗಳು ಶಿವಕುಲಂ ಶಿವನೊಡವೆ। ಯೆನ್ನವಲ್ಲೆಂಬುವಂಗಿಲ್ಲ ಮಲತ್ರ
ಯಂ ಕೇಳೆಂದು ನಿರವಿಸಿದನು||೬|| ಜಾತಿಸೂತಕ ಜನನಸೂತಕಂಗಳು
ಮಹಾ । ಪ್ರೇತಸೂತಕ ನಿತ್ಯಸೂತಕಮುಚ್ಛಿಷ್ಟ ಸೂತಕಮಿವೇಂ
ಪಂಚಸೂತಕಂಗಳಾವರಾಗ್ಯ ಸ್ವಲಿಂಗಭಜನೆಯಾ॥ ಓತನ್ಯತೀರ್ಥ
ಮನ್ಯಕ್ಷೇತ್ರಯಾತ್ರೆಗಳಿ। ಗಾತುರದೆ ಪೋಪುದೀಗನ್ಯದೇವಾರ್ಚನೆ
ವಿ । ನೀತಭವಿಯಾದವರ ತನ್ನ ತಾಯ್ತಂದೆ ಬಂಧುಗಳೆನಲು ಭವಿಸಂಗ
ವು||೭|| ಯೆನ್ನ ಸದ್ಗುರುವೆ ಸುರತರುವೆ ಮುಕ್ತಿಯ ಕರುವೆ। ಚೆನ್ನಬ
ಸವೇಶ ಭವನಾಶ ಸೇಂ ಪೇಳ್ದವಂ। ಮುನ್ನವೇ ಬಿಟ್ಟೆ ನಿನ್ನೇನನುರೆಬಿ
ಡುವುದೆನಲ ವಂಬಿಡುವೆನೆನಗೆ ॥ ಚೆನ್ನಾಗಿ ವೀರಶೈವೋಪದೇಶವನಿ
ಕೊ । ಟ್ಟೆನ್ನ ಭವಪಾಶಮಂ ಪರಿಹರಿಪುದೆನುತೆರಗಲಾ। ಚೆನ್ನಬಸವಂ ಕ
ರುಣದಿಂ ಸಿದ್ಧರಾಮನಂ ನೋಡುತಂ ಪಿಂತೆಂದನು ||೮|| ಶರಣರೆಲ್ಲರು
ಕೇಳ್ವುದೀ ಸಿದ್ಧರಾಮನಾ। ಪರಶಿವನ ಪತಿಬಿಂಬಮೆಂತೆನಲು ಪೂರ್ವ
ದೊಳು । ಗಿರಿಜೇಶನೆಡೆಗೆ ಗಂಧರ್ವರೈತರುತೆ ಭೃಂಗೀಶನಂ ಕಂಡು ನೆ

ಸಲು ॥ ಕೆರಳಿ ಭೃಂಗೀಶ್ವರಂ ಗಂಧರ್ವರಂ ನೋಡಿ। ನರಜನ್ಮದೊಳಿಂ
ಭವಿಗಳಾಗಿ ಸಂಜನಿಸಿ ಬಳಿ। ಕಿರದೆ ದಂಪತಿಗಳಾಗೆಂದು ಶಾಪವನೀಯ
ಲವರಾಗಳಿಂತೆಂದರು ॥೯॥ ತಂದೆ ಕರುಣಿಸು ವಿಶಾಪವನರಿಯದಜ್ಞಾನ
ದಿಂದೆನಕ್ಕೆವು ಕಾವುದೆನುತಲಡಿಗೆರಗಲಾ। ನಂದದಿಂ ಭೃಂಗೀಶ್ವರಂ ನಿ
ಮ್ಮ ಗರ್ಭದೊಳು ಶಿವಯೋಗಿ ಸಂಜನಿಸಲು ॥ ಅಂದಿಗೆ ವಿಶಾಪವೆನೆ
ಗಂಧರ್ವರಾಗ ನಡೆ। ತಂದು ಶಂಕರಗೆರಗಿ ಭೃಂಗಿಯಿಂತೆಮಗಾದುದಂದು
ಗವನೆಲ್ಲವಂ ಪೇಳಲೀಶ್ವರನಂದು ಕೃಪೆಯೊಳೊಲಿದಿಂತೆಂದನು ॥೧೦॥
ಅಂಜದಿರಿ ನಿಮ್ಮ ಜಠರದೊಳೆಮ್ಮ ನಿಜರೂಪು। ಸಂಜನಿಸಿ ನಿಮಗೆ ಮು
ಕ್ತಿಯನೀವನೆನಲೀರ್ವರ್। ರುಂಜುವದೊಳ್ಳೈತಂದು ಸೊನ್ನಲಿಗೆಯೊಳ
ಗೊಪ್ಪುತಿರ್ಪ ಕುಡಿಯೊಕ್ಕಲಿಗರ। ರಂಜಿಸುವ ಗರ್ಭಂಗಳಿಂದುದಿಸಿ
ಪುಣ್ಯಾದಸು। ಪುಂಜಂಗಳಂತೆ ಮೊರಡೆಯ ಮುದ್ದಗೌಡನಾ। ಕಂಜಮು
ಖಿ ಸುಗ್ಗಾಯ್ಗಳೆಂಬ ನಾಮದಿ ಬಳೆದು ದಂಪತಿಗಳಾದರೊಲಿದು ॥೧೧॥
ಇಂತೆಸವ ದಂಪತಿಗಳಿರಲವರ ಗರ್ಭದಿಂ। ಕಂತುಮದಹರನ ಪ್ರತಿಬಿಂ
ಬಮೇ ಜನಿಸಿತದ॥ ನಂತರಂ ಸಿದ್ಧರಾಮೇಶನೆಂದೆಂಬ ನಾಮವನಾಂ
ತು ಸಿರಿಶೈಲಕೆ ॥ ಸಂತಸದೆ ಪೋಗಿಯಾ ಮಲ್ಲಿಕಾರ್ಜುನಲಿಂಗ। ಮಂ
ತನ್ನ ಪುರಕೆ ಕರತಂದು ಪೂಜಿಸುತಲಾ। ಕಂತುಬರೆಗೆಡೆದುಯಮ
ಗೊಂಡದಲ್ಲಿರ್ದರಂ ಕೈಲಾಸಕಿರದೊಯ್ದನು ॥೧೨॥ ಬಸವೇಶನಂತೆ
ನ್ನ ಹೃದಯಮಂ ಬಗಿಗುತ್ತೋ। ರಿಸಿದನೀ ಸಿದ್ಧರಾಮೇಶನ ಮಹಾತ್ಮೆ
ಗಳ ಮಸುರಲಳವೇ ಶಿವಪ್ರತಿಬಿಂಬಮೆನೆ ಸಿದ್ಧರಾಮನತಿ ಭಕ್ತಿಯಿಂ
ದಂ ॥ ಜಸನಾಯ್ತು ನಿಮ್ಮ ಭೃತ್ಯರ ಭೃತ್ಯನೆಂದು ಭಾ। ವಿಸುತಿಷ್ಟ
ಲಿಂಗಮಂ ಪಾಲಿಸೆನೆಗುರು ಚನ್ನ। ಬಸವೇಶನೀನೆಂದು ಸಾಷ್ಟಾಂಗದಿಂ
ದೆರಗಿ ನುತಿಪಸಮನಂತರದೊಳು ॥೧೩॥ ಅಲ್ಲಮಾ ಬಸವ ಮೊದಲಾ
ದಸಂಖ್ಯಾತಗಣ। ರೆಲ್ಲರುಂ ಚನ್ನಬಸವೇಶ ಕೇಳ್ದಿಂ ಕರುಣ। ದಲ್ಲಿ
ಬಿಡದೀ ಸಿದ್ಧರಾಮೇಶ್ವರಂಗೆ ದೀಕ್ಷೆಯನಿತ್ತು ಸಂತಸದೊಳು ॥ ಸಲ್ಲ
ಲಿತ ಮೋಕ್ಷಮಂ ಕೊಟ್ಟು ರಕ್ಷಿಪುದೆನ। ಲ್ಮಲ್ಲನಾ ಚನ್ನಬಸವೇಶ್ವರಂ
ತನ್ನ ಕರ। ಪಲ್ಲವದೆ ಸಿದ್ಧರಾಮೇಶ್ವರನ ಮಕುಟಮಂ ಪಿಡಿದೆತ್ತನಾಕ್ಷ
ಣದೊಳು ॥೧೪॥ ನವರತ್ನಮಯಮಾದ ತನ್ಮಹಾಮಂಟಪವ। ನವ
ದುಕೂಲಂಗಳಂ ನವಕುಸುಮಮಾಲೆಯಂ। ತವೆ ರುಲ್ಲಿಪಟ್ಟೆಗಳ ಮು
ತ್ತುಗಳ ಪೊಸಫಲದಗೊಂಚಲ್ಗಳಿಂ ವಿರಚಿಸೆ॥ ಅವಿರಳದ ಕತ್ತುರಿಯ ಸಾ
ರಣೆಯಂಗೊಳಿಪ। ವಿವಿಧಮುತ್ತಿನರಂಗವಲಿಯಿಂದಲಂತಿಂತು। ಜವ
ನಸದಸುಸ್ಥಳದೊಳೊಂದಿರದೆ ತಂಡುಲದ ಚೌಕಮಂ ಕೈಗೈದರು ॥೧೫॥

ಪೊಳಪೊಳೆವಜಲಪೂರ್ಣವಾಗಿರ್ದ ಸತ್ಪಂಚ| ಕಳಶಂಗಳಂ ಸ್ಥಾಪಿಸೆನಂ
ಗೈದು ಪೊಸನೂಲಿ| ನೆಳೆಗಳ್ವಿದಂ ಸುತ್ತಿಯಷ್ಟವಿಧ ಪೂಜೆಯಿಂದರ್ಚಿ
ಸೆ ತದಾಜ್ಞೆಯಿಂದಂ|| ಬಳಿಕಲಾ ಸಿದ್ಧರಾಮಂ ಭಸಿತವೀಳೆಯಂ| ಗಳ
ಸಖಿಳೆಗಣಕುಲಗಮುಂದಿರಿಸಿನಮಿಸಲ್ಕೆ | ನಲವಿನಿಂದಾತನಂ ಚೆನ್ನ
ಬಸವಂ ಚೌಕಮಧ್ಯದೊಳ್ ಕುಳ್ಳಿರಿಸಿದಂ ||೧೬|| ವರವಿಭೂತಿಯ
ಪಟ್ಟಗಟ್ಟಿ ರುದ್ರಾಕ್ಷೆಯಿಂ | ದಿರದಲಂಕರಿಸಿದ ಭಾರಂಕುರದೆ ತತ್ಕಳಶ|
ಭರಿತಜಲವಂ ತಳೆದು ಸಾಲ್ವರಾಚಾರ್ಯರೊಡನಾ ಕಳಶಪಂಚಕವ
ನು || ಹರುಷದಿಂ ಮೂರುಸೂಳ್ ಸಿದ್ಧರಾಮನುರು | ಶಿರಕೆತ್ತಿಯ
ಭಿಷೇಚನಂಗೈದು ಕಳಶವಂ | ಮರಳಿ ತತ್ಸ್ಥಳದೊಳಿರಿಸಿ ಪರಿಶುದ್ಧ
ನಂ ಮಾಡಿದಂ ಕರುಣದಿಂದಂ ||೧೭|| ವಿವರಿಸಲ್ಬಳಿಕಲಾ ಚನ್ನಬಸವೇ
ಶ್ವರಂ| ತ್ರಿವಿಧದೀಕ್ಷೆಗಳಿಂದೆ ತ್ರಿವಿಧಲಿಂಗಂಗಳಂ | ತ್ರಿವಿಧಾಂಗದೊಳು
ದೀಕ್ಷೆಯಂ ಮಾಡಿ ತ್ರಿವಿಧಮಲಮಂ ಬಿಡದೆ ಛೇದಿಸಲ್ಕೆ || ತವೆ ಸಿದ್ಧರಾ
ಮನಾ ಗುರುಮುಖ್ಯ ಸಕಲಗಣ | ನಿವಹಕ್ಕೆ ಸಾಷ್ಟಾಂಗದಿಂದೆರಗಿ ಕು
ಳಿತು ಮ | ತ್ತವಿರಳಾನಂದದಿಂದೀ ಕಲಶದಿರವನೆನಗುಸುರೆಂದೊಡಿಂ
ತೆಂದನು ||೧೮|| ಆದೊಡಾಲಿಸು ರಾಮ ಪರಶಿವಂ ತಾಂ ತ್ರಿವಿಧ | ಭೇ
ದದಿಂ ಗುರು ಲಿಂಗ ಚರಮೆನಿಸಿ ತನ್ನಯ ಮ| ನೋಗದಿಂ ಪಂಚಸಾದಾಖ್ಯ
ದಿಂ ಪಂಚಕಲೆಗಳನೈದೆ ಗುರುಪೆಸರಿಕ|| ಸಾದರದೊಳಾನಂದಿವಾಹಂ
ಪರಾಶಕ್ತಿ| ನಾದಚಿತ್ಪ್ರಣವಮಂತ್ರಂ ಮುಸುನಿಗಳಶದಿಂ| ದಾದಿಯಾಂ
ಬುಧಿಯೆನಿಪ ಸದ್ಗುರುವೆ ಸಾಲ್ವಗೆ ದೀಕ್ಷೆಯಂ ಪಾಲಿಸಿದನು ||೧೯||
ವಿವರಿಸುವೆ ಕೇಳ್ ನ್ಯಾಲ್ವರಾರಾರೆನಲ್ಪದಾ | ಶಿವನೀಶ್ವರಂ ಮಹೇಶಂ
ಉರುದ್ರರೆನಿಪವರು| ಶಿವದೀಕ್ಷೆವಡೆದಾಚಾರ್ಯರಾಗಿಯಾ ಸಕಲಗಣಕು
ಲಕೆ ದೀಕ್ಷೆಯನೆ ಮಾಡಿ || ತವೆ ಹರಿಯಜೇಂದ್ರಾರ್ಕಶಶಾಂಕದಿಕ್ಪಾ
ಲ| ನಿವಹಕಂ ನರಸುರೋರಗಗರುಡಗಂಧರ್ವ| ವಿವಧರಾಕ್ಷಸಯಕ್ಷ
ಸಿದ್ಧವಿದ್ಯಾಧರಾಪ್ಸರ ಕಿನ್ನರವಿತತಿಗೆ ||೨೦|| ತಿಳಿಯೆ ಮನುಮುನಿ
ನಿಪಿಶಾಚಾವಳಿಗೆ ಕಿಂಪುರುಷ| ಕುಲಕೆ ವರಶೈವಾಗಮೋಕ್ತಪ್ರಕಾರ
ದಿಂ | ನಲವಿನಿಂ ದೀಕ್ಷೆಯಂ ಮಾಡಿ ಮರ್ತ್ಯದ ಜನದ ಭವಬಂಧಮಂ ಕಳೆ
ಯಲು|| ಇಳೆಯೊಳು ವಂಶದಿಂ ರೇವಣಸಿದ್ಧನಿ | ರ್ಮಲಮರುಳ
ಸಿದ್ಧನೇಕೋರಾಮನತುಳಗುಣ| ನಿಳಯ ರಾ ಪಂಡಿತಾರಾಧ್ಯರಾದ
ಕ್ರಮದೊಳವರಿರವನೀಂ ಕೇಳ್ವುದು ||೨೧|| ಪರಿವಿಡಿಯೊಳಾರೇವ
ಣಗಾದಿಶಕ್ತಿತ| ತ್ಪುರುಷಮುಖವೆಂಟು ಜಡೆಯೋಗದಂಡಂ ಪೈಗೆ|
ಕರಿಯುಕಂ ಬಳಿಯುಕುಪಸಗಂಧೆ ಬೊಮ್ಮಚರಿ ಯಾತ್ರವಂ ಲೋಹ

ಬಂದಂ॥ ವಿರಚಿಸಿದಮುರಿಪಾತ್ರೆಯುಂಕುಂಡಲಂತನ್ನ । ಕರದಿನ
ಲದಶಾಂತಮಲ್ಲಿಕಾರ್ಜುನಲಿಂಗ। ಮೂರುಪಣವಮಂತ್ರಮಾಯುಗ್ಮ
ದಮ ತುಳಸೀಸರಿವಾಸನಂಕೇಳ್ವುದು ॥೨೧॥ ನಕ್ಷತ್ರಪದ್ಮತದತಟ
ದೊಳಿರ್ಪರ್ನಂಕಲ್ಪ। ವೃಕ್ಷದಡಿಯಲ್ಲಿಪದ್ಮಾಸನಸ್ಥಸವಾತ । ದಕ್ಷುಜ
ಮರ್ಜದಗದ್ದುಗೆಯುಭಸ್ಮರುದ್ರಾಕ್ಷಿಯುಂತನ್ನಶಿಷ್ಯಕುಲಕೆ॥ ಓಕ್ಷ
ಗೈವಲ್ಲಿವರಪಾರಿಜಾತದತಳಿರ। ಪಕ್ಷದಿಂದೆಸಪಲೋಪದಕಳಶವು
ಸಹ। ಸ್ರಾಕ್ಷದಿಕ್ಕಿನೊಳಿಟ್ಟುಪೂಜಿಪರುಸಿದ್ಧರಾಮೇಶನೀಂಕೇಳೆ
ದನು॥೨೨॥ ತ್ರಿಳಿವುದುಳಿಸಿದ್ಧೇಶ್ವರಂಗಘೋರಾಸ್ತ್ರವಾ। ಸ್ಪರ್ಶಳಿವ
ಬಹುಶಿಖಿಗಳಿಚ್ಛಾಶಕ್ತಿಸೇರಗುಗಂ। ಬಳಿಗಂಧೆಲೋಕಪಿಂಛಮಾಡಿದೆಬ
ಮುರಿಪಾತ್ರೆಯುಂಕುಂಡಲಂಕ್ರಿಯರೊಳು॥ ತೊಳಗುವಕುಠಾರದ
ಡಂಬಾಯೆಳವುಕ್ಷೈಕ್ಯ। ದೊಳೆಕಪಿಲಸಿದ್ಧಮಲ್ಲಿಕಾರ್ಜುನಲಿಂಗ
ದೊಲವಾಷಡಕ್ಷರಿಯಮಂತ್ರಂಯುಜುರ್ವೇದ ಮಾತಂಗೆಕೇಳೆಂ
ನು॥೨೩॥ ಬಿಡದೆಪು । ವಾಸನಂಯತ್ತಾಗ್ರಶ್ರಮಂಸಮಂ। ಬಡೆಕುಮಾ
ರಾಗ್ರಗತಮಂದಾರತರುತಟಂ। ಬಿಡದುವ್ಯಾಘ್ರಚರ್ಮದೊಳುಗೋ
ಮುಖಾಸನದೊಳಿರ್ಪ್ಪಂಭಸ್ಮರುದ್ರಾಕ್ಷಿಯು॥ ತೊಡಗಳಿಂದೀಕ್ಷೆಯುಂಶಿ
ಷ್ಯಗೆಕರುಣಿಪಂ। ಕೊಡುವಲ್ಲಿದೂರ್ವಾಂಕುರಾದಿಕುಸುಮದೆತೆ
ಕ। ಗದೆಯುಲೋಗದಕಳಶವಾತಂಗೆಸಿದ್ಧರಾಮೇಶನೀಂಕೇಳೆಂ
ನು॥೨೪॥ ಕ್ರಮದಿನೇಕೋರಾಮತಂಬೆಗಂನಾಮದೇ। ಮಮುಖಪ್ರ
ಜಡೆಕಾವಿಯಂಬರಂತಾಂಪ್ರಟಂ। ಸಮದಮುರಿಪಾತ್ರೆಯುಂಕು
ಡಲಂಚಿತ್ರಗಂಡೆಂಜ್ಞಾನಶಕ್ತಿಶಿಖಿಗೆ॥ ಅಮರಿಪ್ಪವರಭೋಗಮಲ್ಲಿಕಾ
ರ್ಜುನಲಿಂಗೆ। ಮಮತಪ್ರಸಾದಪಂಚಾಕ್ಷರೀಮಂತ್ರಮು। ತ್ತಮಸಾ
ಮವೇದಂಮರಾಳೆಮಾಸನವೆಸೆವುದಂತಂ..ಕೇಳೆಂದನು॥೨೫॥ ಭೂ
ತಿರುದ್ರಾಕ್ಷಿವಾಸಪ್ರಸ್ಥದಾಶ್ರಮದೊಳಾ। ತನಿರ್ಪಂಮೇರುಗಿರಿತಟ
ದವಟವೃಕ್ಷ। ದಾತಡಿಯೊಳೆಸಪದ್ಮಾಸನಸ್ಥಮರಿಕಾಷಾಂಬರ
ಗದ್ದುಗೆಯೊಳು॥ ಪ್ರೀತಿಯಿಂದೀಕ್ಷೆಯಂಕೊಡುವಲ್ಲಿಸೊಂಬುಳಿಯೆ
ಹನಗಲಂಕಾರವಾತಾಮ್ರದುರುಕಳಶ। ಮಾತಂಗೆಧನದದಿಕ್ಕಿನೊ
ಳ್ಪ್ರದಿದುಸಾವ್ಯಲಕ್ಷಣಂಕೇಳೆಂದನು॥೨೬॥ ವರಪಂಡಿತಾರಾಧ್ಯ
ರಿಗೆಕ್ರಿಯಾಶಕ್ತಿಸಿಂ। ಗರದೇಕಶಿಖಿಬಿಳಿದಿನುಡೆ ಬೆಸ್ತೆಯಿಂಸಮದ
ಮುರಿಯುಮಾಪಾತ್ರೆಮಾಣಿಕ್ಕಕುಂಡಲಂಮುಖವೆವಿಮಲಸದ್ಯೋ
ಜಾತನುಂ॥ ಕರದೊಳಾದೊಡಮಧಿಕಕಕ್ಷದೊಳಗಾದೊಡಂ।
ರಿಸುವದುವರಚನ್ನಮಲ್ಲಿಕಾರ್ಜುನಲಿಂಗ। ಮುರುಹಂಸಪಂಚಾ

ಕ್ಷರೀಮಂತ್ರಮೆಸೆವಥರ್ವಣವೇದಮುವರ್ಗೆಂದನು ||೨೮|| ಮತ್ತ
ಗಪವಾಕಂಗ್ರಕಸ್ರಾಶ್ರಮಂಚೆಲ್ವು | ವೆತ್ತೆಸೆಯಲಾತ್ರಿಕೂಟಾದ್ರಿತ
ಟದಿನಿವಾವಿ| ನೊತ್ತಿನೊಳುಗುರುಸುಖಾಸನಕಮರಿಪೊಸರನ್ನಗಂ
ಬಳಿಯುಗದ್ದುಗೆಯುಯೊಳು || ಬಿತ್ತರದೆಕುಳ್ಳಿರ್ದುಶಿಷ್ಯರ್ಗೆದೀಕ್ಷೆಗ
ಳ | ನಿತ್ತುರಕ್ಷಿಸುವಲ್ಲಿನಾಗವಲ್ಲೀದಳಂ | ಬೊತ್ತಬೆಳ್ಳಿಯುಕಳಶಬಂ
ದೊಪ್ಪುವಂವರುಣದಿಕ್ಕಿನೋಳ್ಕೇಳೆಂದನು ||೨೯|| ಹರುಷದಿಂದಾ
ನಾಲ್ವರಾಚಾರ್ಯರೊಲವಿನಿಂ| ಬರುತಿರ್ಪರ್ಯುಗಯುಗಂಗಳೊಳು
ಮತಿಕರುಣದಿಂ | ಧರೆಯುಭಕ್ತರ್ಗೆದೀಕ್ಷೆಯುನಿತ್ತುರಕ್ಷಿಸುತ್ತಿರಲಾ
ಗಿಯಾವಂಶದಿಂ|| ಪಿರಿಯುರುಮುವಾನಾಲ್ಕುಕಳಶವುಂನಾಲ್ದೆಸೆಯೊ
ಳಿರಿಸಿತನ್ನಮಧ್ಯದೊಳುಗುರುಕಳಶವುಂನಿರಿಸಿ | ಪರವುಶಕ್ತಿಯೊಳೆ
ತತ್ಕಳಶವುಂಗುರುಭಾವದೊಳುಕಂಡುಪೂಜಿಸುವುದು||೩೦|| ಕರು
ಣದಿಂದೀಕ್ಷೆಯುಂಕೊಡುವರುಂಶಿಷ್ಯರುಂ| ಕರಚರಣಮುಬ್ಬುವಾದ
ವಯುವದೊಳಿಳ್ಳಿನಿತು | ಪರಿಕಿಸಲ್ಕಾನವಿಲ್ಲದೆಹೀನಜಾತರಲ್ಲದೆ
ನಾಲ್ಕುವರ್ಣದರ್ಗೆ|| ತರತರದೊಳಾವಿಪ್ರರೋಳ್ಮೂರುವರುಷವುಂ
ತರಸುಮಕ್ಕಳೆನಾರುವರುಷವಾವೈಶ್ಯರಂ | ನಿರುತವೊಂಬತ್ತುವ
ರುಷಂಶೂದ್ರರುಗಳನೀರಾರುವರುಷಂನೋಳ್ಪುದು|| ೩೧|| ಇಂತವ
ರವುನದಪಕ್ಷಾಪಕ್ಷಭೇದವುಂ | ತಾಂತಿಳಿದುನೋಡಿದೀಕ್ಷತ್ರಯುಂ
ಗಳನೊಲ್ದು | ಸಂತೋಷವಿಂತ್ರಿವಿಧಲಿಂಗವುಂತ್ರಿವಿಧಾಂಗದೊಳು ಪ
ತಿಷ್ಠಿಸುವರೆನಲು || ಕಂತುಹರನಪರಾವತಾರದೀಕ್ಷತ್ರಯುವು| ದಂ
ತುಲಿಂಗತ್ರಯುಮುದಾವುದಂಗತ್ರಯುಮು | ನೀಂತಿಳಿಯುಪೇಳೆನಲು
ಸಿದ್ಧರಾಮೇಶಕೇಳಾಗುರುಪೆಕರುಣದಿಂದಂ||೩೨|| ಉರುತರಜ್ವಲಿ
ತಕಾಲಾಗ್ನಿರುಚಿಯುಂಜರವ| ಪರಮುವಿದ್ಯುತ್ಕೋಟಿ ಕಾಂತಿಯುಂ
ಪಳೆವಭಾ| ಸುರಶಿಖಾಚಕ್ರದೊಳುಸೂಕ್ಷ್ಮಬಂಬಿದ್ರೂಪಿನಿಂದೆ ಸವ
ಚಿತ್ಕಳೆಯುಸು||ಗುರುವರಂಭಾವಕ್ಕೆತಂದುತದ್ಭಾವದಿಂ, ದಿರದಾಮನ
ಸ್ಸಿಂಗೆತಂದುತನ್ಮನದಿಂದೆ| ಭರದೆದೃಕ್ಕಿಗೆತಂದುತದ್ದೃಕ್ಕಿನಿಂದಿರದೆ
ವರ ಕರಸ್ಥಲಕೆತಂದು ||೩೩|| ಕರುಣದಿಂಶಿಷ್ಯನುರುಮಸ್ತಕದೆಹ
ಸ್ತವಿ| ಟ್ಟಿರದೆವೇದಾದೀಕ್ಷೆಯಿಂಭಾವಲಿಂಗವುಂ| ಪರಮುಕಾರಣತನು
ವಿನೊಳುಕರ್ಣದೊಳುವಿರಾಜಿಸುವವುಂತಾಪ್ರದೀಕ್ಷೆಯಿಂ|| ಉರುತರ
ಪ್ರಾಣಲಿಂಗವಸೂಕ್ಷ್ಮತನುವಿನೊಳು| ಕರಬಂಕ್ರಿಯಾದೀಕ್ಷೆಯಿಂದಿ
ಷ್ಟಲಿಂಗವುಂ | ನಿರುತವಾ ಸ್ಥೂಲತನುವಿನೊಳುಂಪ್ರತಿಷ್ಠಿಸುವರೆಲಿ
ರಾಮುಕೇಳೆಂದನು ||೩೪|| ಗುರುವರಂಲಿಂಗಮುಕೊಡುವುದೇದೀಯುಂ

ಬು। ದಿರದಾಮಲತ್ರಯವಭೇದಿಪುದೆ ದೀಕ್ಷೆಯಂ । ದೆರಡುಮಾದೀ
ಕ್ಷಾಭೇದಾನಮಿಂನಾಲಿಸೈಗುರುವಿನಮಹಾತ್ಮೆಗಳನು॥ ಸರಸಿಜಾಸ
ನವಿಷ್ಣುರುದ್ರರೆಂದೀಶ್ವರಂ।ಪರಸದಾಶಿವತತ್ವನಿಚಯಕಾಧಾರನುಂ
ಪರಮಚೈತನ್ಯಾತ್ಮ ಶಾಶ್ವತಂ ಶಾಂತನ್ನಿರಂಜನಂ ನಿರ್ಮಲಿನನು ॥
ನಿರುತವಹ ನಾದಬಿಂದುಕಳಾವ್ಯತೀತನುಂ। ಪರಮಷಟ್ತ್ರಿಂಶತ್ತ್ವ
ತತ್ವಮಾಲಾಭೂಷ । ನುರುತರಜ್ಞಾನಶಕ್ತಿಂ ಪೆಯುಕ್ತಂ ನಿತ್ಯನಿಂತ
ಪ್ಪಗುರುವಿನಿಂದಂ॥ಪರವಿಜ್ಞವಾಗಿನಗರೋರಧಿಕಮೆಂದು ಶ್ರುತಿ। ಯೊ
ರೆವುತಿಪ್ಪುದು ರಾಮ ಕೇಳೆನಕ್ತಿಂತಪ್ಪ।ಪೆರಮಗುರು ನೀನೆನೀಂಪೇ
ಳ್ದ ಲಿಂಗತ್ರಯದಭೇದವಂತಿಳುಪೆಂದನು ॥೩೬॥ ಒರವೆನಾಲಿಸು
ರಾಮ ನಿನಗೆನಾಂ ಮುಂಪೇಳ್ದ। ಪರಮಶಾಲಿಂಗವೇ ನಿಷ್ಕಲದೆ ಭಾವ
ಕೊಲಿ । ದಿರದೆಗೋಚರಮಾಗಿ ಭಾವಲಿಂಗಮದಾಯ್ತು ಆದೆಮೆ ಸೂಕ
ಗೋಚರಿಸಲು॥ ಉರುಸಕಲನಿಷ್ಕಲದೆ ಪ್ರಾಣಲಿಂಗಮದಾಯ್ತು ಪರಿ
ಕಿಸಲದೇ ಕಣ್ಗೆ ಗೋಚರಿಸಿ ಸಕಲದಿಂ। ಪಿಡಿವಿಡಿಯೊಳಿಷ್ಟಲಿಂಗಮದಾ
ಯ್ತು ತಲ್ಲಿಂಗದಿರವನೀಂ ಕೇಳೆಂದನು ॥೩೭॥ ಪರಿಕಿಸಲ್ಕತ್ಯತಿಷ್ಠದ್ದ
ಶಾಂಗುಲಮಜಂ । ನಿರುಪಮಂ ನಿತ್ಯಂ ನಿರಾಮಯಂ ನಿರ್ಗುಣಂ। ನಿ
ರಘನ್ನಿರಂಜನಂ ನಿರ್ದ್ವಂದ್ವಮವ್ಯಕ್ತಮವ್ಯಯಂ ನಿಶ್ಶೂನ್ಯನು॥ ವೆ
ರಸಾಕ್ಷಿರೂಪಕ ಕರ್ತೃಕರ್ಮಭೋಕ್ತೃಕಂ। ನಿರುತಮಿರದೇಕ
ಮೇವಾದ್ವಿತೀಯಂ ಬ್ರಹ್ಮ। ಪೆರಕೆಪರವೆನಿಸುವ ಪರಬ್ರಹ್ಮಮಾ ಲಿಂ
ಗಮೆಲೆರಾಮ ಕೇಳೆಂದನು ॥೩೮॥ ಇಂತಪ್ಪ ಲಿಂಗಮಂ ಶಿರದೊಳ್ ಮು
ಖೊಕ್ಕದೊಳ್। ಸಂತತಂ ಗಳಬಾಹುಕಕ್ಷೆ ವಕ್ಷಂಗಳೊಳ್। ಸಂತಸದೆ
ಧರಿಸವೇಳ್ಪುದು ನಾಭಿಯಿಂ ಕೆಳಗೆ ಧರಿಸೆ ಪಾತಕಮಿರ್ಪುದು॥ ಮುಂ
ತೆ ಮಜ್ಜನ ಭೋಜನಂಗಳೊಳ್ ಮಲಮೂತ್ರ। ಮಂತವೆವಿಸರ್ಜಿಸುವ
ಕಾಲದೊಳ್ ನಿದ್ರೆಯೊಳ್ । ಕಾಂತೆಯರರತಿರಾಜಭಯ ಮಾದಿಗ
ಳೊಳ್ ಲಿಂಗದಿಂದಗಲದಿರವೇಳ್ಪುದು ॥೩೯॥ ಎಲೆಸಿದ್ಧರಾಮೇಶಕೇ
ಳ್ವುದೀ ಲಿಂಗಕ್ಕೆ । ತಿಳಿಯಲಾಜಂಗಮವೆ ವದನವಾಜಂಗಮದ । ಲ
ಲಿತಮುಖದಿಂದೆ ಲಿಂಗಕೆ ತೃಪ್ತಿಯೆಂದೊಡಾಜಂಗಮದ ಲಕ್ಷಣವನು ॥
ನಲವಿನಿಂ ತಿಳುಪೆನಲ್ಕಾದಿಮಧ್ಯಾಂತವಂ॥ ಕಳಿದವಂ ನಿತ್ಯಪರಿಪೂ
ರ್ಣಂ ನಿರಾಮಯಂ। ಸಲೆಸಗುಣನಿರ್ಗುಣಂ ಹರಿಯಜಮುರೇಂದ್ರ ಶಿವ
ಮುಖ್ಯಪೂಜಿತನೆಂದನು ॥೪೦॥ ಜಂಗಮವೆನಲು ಜನನಮಾ ಮರಣ
ವರ್ಜಿತಂ। ಜಂಗಮವೆನಲು ನಾದಬಿಂದುಕಳೆ ಸಂಯುತಂ । ಜಂಗ
ಮವೆನಲು ಸ್ವರ್ಗ ಮರ್ತ್ಯ ಪಾತಾಳಾದಿ ಸಕಲಭುವನಾಧಾರನು॥

ಜಂಗಮವೆನಲುಸೃಷ್ಟಿದಾನಂದರೂಪಕಂ । ಜಂಗಮವೆನಲುತ್ರಿವಿಧ ಮೂರ್ತಿಸ್ವರೂಪಕಂ । ಜಂಗಮವೆನಲುತ್ರಿವಿಧತತ್ವಾತ್ಮಕಂಸಿದ್ಧ ರಾಮೇಶಕೇಳೆಂದನು ॥೪೧॥ ಇಂತೆಸವಚನ್ನಬಸವೇಶ್ವರಪುರಾಣ ಮಂ। ಸಂತಸದಿಬರದವರ್ಗೋದಿದರ್ಗವಾ।ದ್ಯಂತಮಂಬಿಡದೆಪೇಳ್ದ ರ್ಗೆಪರಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ ॥ ಸಂತತಂಸಕಲಸುಖಮಂಸ ಕಲಭೋಗಮನ। ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ। ಕಂತು ಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ ॥೪೨॥

ಐದನೆಯಕಾಂಡದಲ್ಲಿ೭ನೇಸಂಧಿ ಮುಗಿದುದು

ಅಂತು ಸಂಧಿ ೪೯ಕ್ಕಂ ಪದ ೨೭೨೪ಕ್ಕಂ ಮಂಗಳ.

## ೮ನೇ ಸಂಧಿ

ಸೂಚನೆ॥ ಭಸಿತರುದ್ರಾಕ್ಷಿಪಂಚಾಕ್ಷರಿಯಮಹಿಮೆಗಳ। ನೊಸೆದುಪಾದೋದಕಪ್ರಸಾದದಮಹಾತ್ಮೆಗಳ । ನಸಮಲಿಂಗಾರ್ಚನಾಭೇದಮಂಗುರು ಚನ್ನಬಸವನ್ನಿರೂಪಿಸಿದನು॥

ಪದ॥ ಪುಷ್ಕರಾಂಬಕನಯನಪೂಜಿತಪದಾಂಭೋಜ। ಪುಷ್ಕರಾಷ್ಟೇಂದುವಹ್ನಿತ್ರಿಲೋಚನನೆಸವ । ಪುಷ್ಕರಾಸನಶಿರಚ್ಛೇದಕನೆ ಪುಷ್ಕರಾನನಪಾರ್ವತೀವಲ್ಲಭ॥ ಪುಷ್ಕರಕರಾಸುರಸಗರ್ವಪರ್ವತಕುಲಿಶ। ಪುಷ್ಕರಕಳೆಂಬಕಾಂಗಾರಣ್ಯಘನದಾವ । ಪುಷ್ಕರಸುಕೇಶದಿಗ್ವಸನಪಂಪಾವಿರೂಪಾಕ್ಷರಕ್ಷಿಸುನತರನು ॥೧॥ ಪರಮಸದ್ಗುರುಚನ್ನಬಸವೇಶನೀಂಪೇಳ್ದ । ಗುರುಲಿಂಗಜಂಗಮಮಹಾತ್ಮೆಗಳನರಿದೆನಾಂ । ಕರುಣದಿಂಮುಂತೆಲಿಂಗಾರ್ಚನೆಯಮಾಳ್ಪತೆರನಂ ನಿರೂಪಿಸುವುದೆನಲು॥ ಒರವೆನಾಲಿಸುರಾಮಪೂರ್ಣನಕ್ಷತ್ರಂಗ।ಳಿರುತಿರ್ಪಕಾಲಮುತ್ತಮವೆಲ್ಲಂನಾಡೆ । ಪರೆವಾಗಮಧ್ಯಮಂರವಿಯುದಯಕಾಲದರ್ಚನೆಯೆ ತಿಳಿಯಲ್ಕಧಮವು ॥೨॥ ಉತ್ತಮದಕಾಲದೊಳುಶಿವನನೆನವುತ್ತಲೆ। ಚ್ಛತ್ತವ್ಯಮುರಿದೆದ್ದುಮಲಮೂತ್ರಮಂತ್ಯಜಿಸಿ । ವೃತ್ತಿಕಾಶೌಚಮಂಮಾಡಿಹಸ್ತಾಂಘ್ರಿಗಳನೊಲವಿನಿಂತೊಳೆದುಬಳಿಕ॥ ಬಿತ್ತರದಪಾಲ್ಮಗುಳ್ವಳ್ಳಿಮರದೊಳುಖದಿರ। ಮುತ್ತಮಂತತ್ಕಾಷ್ಠದಿಂದಂತಧಾವನಾ।ವೃತ್ತಮಂತೀರ್ಚಿ ಲಿಂಗೋದಕದೆಗಂಡೂಷಮಂಮಾಡಬೇಕೆಂದನು॥೩॥ ಬಳಿಕಮುಖಮಜ್ಜನಂಗೈದುಮಡಿವರ್ಗಮಂ । ತಳೆದುವಿಮಲೇಶಾನದಿಕ್ಕಿನೊಳಗಿರದೆಳಂ । ಗೊಳಿಪಶಿವಪೂಜಾಸುಮಂಟಪಕೆಬಂದುಸಮಾರ್ಜನಂಗೈದುಮೇಲೆ॥ ಸಲೆರಂಗವಲ್ಲಿಯಿಂದಲಂಕರಿಸಿಭಕ್ತಿಯಿಂ । ಲಲಿತವ

ದ್ಮಾಸನದೊಳ್ಪೈದೆಮಡಿಸಿಸುನಿ । ಷ್ಠಲಚಿತ್ತನಾಗಿಶಿವಪೂಜೋಪ
ಕರಣಮಂತರತರದೊಳಿರಿಸಿಕೊಂಡು ॥೪॥ ರಾಮಕೇಳ್ಬಳಿಕಭಸ್ಮ
ಸ್ನಾನಮಂಮಾಡಿ। ಸೋಮದಿಂಭಸಿತದುದ್ಧೂಳನಂಗೈದುಸು । ಪ್ರೇ
ಮದಿಂವರತ್ರಿಪುಂಡ್ರಂವಿಮಳರುದ್ರಾಕ್ಷಿಯಿಂದಳಂಕರಿಸಿಕೊಂಡು॥ ಆ
ಮೇಲೆಶಿವಮಂತ್ರದಿಂದಲುಪಕರಣಸಂ । ಸ್ತೋಮಮುಮನರ್ಚಿಶಿವಾ
ರ್ಚನಂಗೈವುದೆನೆ । ಸ್ವಾಮಿನೀವಿವರಭೇದಂಗಳಂವಿಸ್ತರಿಸಿಪೇಳ್ವು
ದೆನಲಿಂತೆಂದನು॥೫॥ ವಿದಿತಸದ್ಯೋಜಾತಮುಖದಿನಾದುದುಪೃಥ್ವಿ
ಯುದರಿಂನಿವೃತ್ತಿಕಳೆಯಾಕಳೆಗೆಕಪಿಲವ । ರ್ಣದನಂದೆಯೆಂಬಗೋ
ವರದಗೋಮಯದಿನಾದುದುಭೂತಿವಾಮದೇವ ॥ ಮದನದಿಂಜಲ
ಮಾದುದದರಿಂಪ್ರತಿಷ್ಠೆಕಳೆ । ಯುದರೊಳಗೆಕೃಷ್ಣವರ್ಣದಭದ್ರೆಯೆಂ
ಬಗೋ । ವದರಗೋಮಯದಿಂದೆಭಸಿತವಾದುದು ಸಿದ್ಧರಾಮೇಶ
ಕೇಳೆಂದನು ॥೬॥ ಪೊಳೆವಘೋರಾಸ್ಯದಿಂತೇಜಮುದರಿಂವಿದ್ಯ । ಕ
ಳೆಯುದರಿನರುಣವರ್ಣದಸುರಭಿಯುದರಿನಿಂ। ದಿಳಿದಗೋಮಯದೊ
ಳಾದುದುಭಸ್ಮಮೆಸವತತ್ಪುರುಷಮುಖದಿಂಮರುತನು॥ ಸುಳಿದು
ದದರಿಂದಾಯ್ತುವರಶಾಂತಿಯೆಂದೆಂಬ । ಕಲೆಶುಭ್ರವರ್ಣದಸುಶೀಲೆ
ಗೋವಾಯ್ತುತ। ತ್ಕಳೆಯಿಂದಲದರಗೋಮಯದೊಳಾದುದುಕ್ಷಾ
ರವೆಲೆರಾಮಕೇಳೆಂದನು ॥೭॥ ಭೂತೇಶನೀಶಾನಮುಖದೆನಭವಾ
ಯ್ತುಶಾಂ। ತಾತೀತೆಕಲೆಯುದರೊಳಾಕಲೆಯೊಳಾದುದ್ಯು। ಸಾತಿಶ
ಯಚಿತ್ರವರ್ಣದಸುಮನೆಯುದರಗೋಮಯದಿಂದೆರಕ್ಷೆಯಾಯ್ತು॥
ಭೂತಿಯಿಂಶ್ರೀಭಸಿತದಿಂಜ್ಞಾನಭಸ್ಮದಿಂ। ಪಾತಕಹರಕ್ಷಾರದಿಂವಿಪತ್ತಿ
ಳ್ಗಖಿಳ। ಭೀತಿಯಿಂಕೆಡಿಸಿರಕ್ಷಿಸುವುದೇರಕ್ಷೆಇಂತಿವರಪರಕೇಳೆಂದನು॥
ಎಲೆರಾಮಕೇಳ್ಭಕ್ಷಣೆವತ್ಸರಹಿತೆರುಜೆ । ಸಲೆಶಕ್ತಿಹೀನೆವಿಕಟಾಂ
ಗಿಬಹುಭಕ್ಷಬರೆ। ಗೊಳಗಾದುದತ್ಯಂಗಹೀನೆನಿರ್ವೀರ್ಯವಂಧ್ಯಾದ್ಯ
ಲಕ್ಷಣಪಶುಗಳಂ ॥ ಕಳೆದುಸಲ್ಲಕ್ಷಣದಗೋವಿತ್ತಗೋಮಯಂ । ನೆ
ಲಕಿಳಿಯದಾಂತಾಂತುಕೊಂಡನದಂಘನಭಕ್ತಿ। ಯೊಳಿಗರಣಕಬಳ
ಶೋಷಣಗಸನವರಶೋಧನಾಭಿಮಂತ್ರಂಗಳಿಂದಂ ॥೯॥ ವಿರಚಿಸಿದ
ಭಸಿತವಿಲ್ಲಗೊಡೆಪರರಿತ್ತುದಂ। ವರಭಕ್ತಿಯಿಂಕೊಂಡುಶಿರವದನಹೃ
ದ್ಗಳಸ್ವಚರಣಯುಗಸರ್ವಾಂಗಕೀಶಾನತತ್ಪುರುಷಯುಗಮಘೋ
ರಂಕ್ರಮದೊಳು॥ ಉರುವಾಮದೇವಸದ್ಯೋಜಾತವೆಂಬಿವಂ। ಪರ
ಮಪಂಚಾಕ್ಷರಿಗಳಿಂವಿಭೂತಿಸ್ನಾನ। ಪರಿಶುದ್ಧನಾದವಂಗಿಲ್ಲಭವಬಂ
ಧನಂರಾಮನೀಂಕೇಳೆಂದನು ॥೧೦॥ ಮಳೆಬಿಸಿಲ್ಗೊಡಿಬರಳಿದುವೆದಿ

ಷ್ಯಸ್ನಾನ । ಮಿಳಿಯೆ ಗೋಧೂಳಿಗಾಳಿಗೆ ತೋರೆ ವಾಯುವ್ಯ । ಪೊಲವಿನಿಂ ಜಲಧಿಸಪ್ಪುದು ವಾರುಣಂ ತಜ್ಜಲಕ್ಕೆ ಗಂಗಾಸ್ನಾನದಿಂ॥ ಫಲಮಧಿಕಮೀಶ್ವರಧ್ಯಾನಂ ಮನಸ್ನಾನ । ಮೆಱೆದಾಮಭಸ್ಮದಿಂದಪ್ಪುದಾಗ್ನೇಯಮಿವ । ರೊಳಗೆಲ್ಲಮಾಗ್ನೇಯಮಲ್ಲದಿಂ ನಿಲ್ಲುತ್ತಮಸ್ನಾನ ಕೇಳೆಂದನು ॥೧೧॥ ಒರವೆಸಾಲಿಪ್ಪುದು ಭಸ್ಮೋದ್ಧೂಳನಂಗೈದು । ಪರಿಶುದ್ಧನಾಗಿ ವರಮಧ್ಯಮಾಂಗುಷ್ಠಯುಗ । ಮಿರದ ನಾಮಿಕೆಗಳಿಂ ಧರಿಸು ತ್ರಿಪುಂಡ್ರಮಂ ತದ್ಧೃತಾಸ್ಥಾನಂಗಳು ॥ ಶಿರದೊಳಗೆ ಶಿವ ಭಾಳದೊಳು ಮಹೇಶ್ವರ ಕರ್ಣ । ಕುಱು ರುದ್ರ ಚರಣದ್ವಯಂಗಳೊಳು ಶ್ರೀಕಂಠ । ವರಶಂಭು ಭುಜಯುಗದೊಳೀಶ ಸುಮಹಾದೇವ ವಕ್ಷದೊಳು ಘನ ಪಶುಪತಿ ॥೧೨॥ ವರನಾಭಿಯೊಳಗೆ ಶಂಕರ ಪೃಷ್ಠದೊಳು ವೃಷಭ । ವರಯಾನ ಕಕುದಿನೊಳು ಪರಮಾತ್ಮ ಮಂತ್ರದಿಂ । ಧರಿಸಿಪುದು ಪ್ರಾರೋಕ್ತದೇಕಾದಶಸ್ಥಳದೊಳಿಮ್ಮಂಡೆ ಕೇಳು ರಾಮ ॥ ಪರಿಕಿಸಲು ಮೂರ್ಧ ಭಾಳ ಶ್ರವಣ ದೃಗ್ನಾಸ । ಪರಮಾಸ್ಯ ಬಾಹು ಭುಜ ಕುಚ ಕುಕ್ಷಿ ಮಣಿಬಂಧ । ಮುರು ಪಾರ್ಶ್ವ ನಾಭಿ ಮೇಢ್ರೋತ್ಪೃಷ್ಠ ಜಾನು ಜಂಘೋರು ಪಾಯ್ವಂಘ್ರಿಗಳಿವು ॥೧೩॥ ಮೂವತ್ತೆರಡುದ್ಧೃತಸ್ಥಾನಮಿವಕಾರದೊಡೆ । ಭಾವಿಸು ಶಿರೋಭಾಳ ಕರ್ಣಗಳ ಬಾಹುಸ । ದ್ಭಾವದೊಳು ಮಣಿಬಂಧ ಹೃದಯ ಪೃಷ್ಠೋನ್ನಾಭಿ ಭುಜಮೇಷ್ಟವೆಂದೆನಿಸುವ ॥ ಈ ವಿಮಲಷೋಡಶಸ್ಥಾನಮಿವಕಾರದೊಡೆ । ತೀವುವುದು ಭಾಳಗಳ ಭುಜಹೃದಯನಾಭಿಯ ಪ ॥ ರಾವಳಿಯೆ ನಿಪ್ಪಷ್ಟಮಸ್ಥಾನಮಿವನುಳಿಸಬಾರದಾಲಿಪುದೆಂದನು ॥೧೪॥ ಇರದೆ ಭೂತಪ್ರೇತಘನತರಾಪಸ್ಮಾರ । ಪರಮಪೈಶಾಚ ಘನ ಜಟ್ಟಿ ಗಂಭೀರ ಪರ್ವ । ತರ ಬ್ರಹ್ಮರಾಕ್ಷಸಾದ್ಯಖಿಳ ದುಷ್ಟಗ್ರಹಕೆ ದುಷ್ಟಮೃಗಸಂದೋಹಕೆ ॥ ಉರಗವೃಶ್ಚಿಕಭೀತಿ ಸಿಡಿಲಭಯ ರಾಜಾಗ್ನಿ । ವರಚೋರರೋಗಭಯ ಚೆಯ ಕಾವಿಭೂತಿಯದು । ಚಿರಳ ಸೊಂಕಿದೊಡೆ ಪರಿಹರಿಸುವುದದೇಮಹೇಶ್ವರರೂಪವಹುದೆಂದನು ॥ ರಾಮ ಕೇಳ್ಮುಂದೆ ರುದ್ರಾಕ್ಷೆಯ ಮಹಾತ್ಮೆಯಂ । ಕಾಮಮದಮರ್ದನಂ ಪೂರ್ವದೊಳು ತ್ರಿಪುರನಿ । ದೂರ್ಮಮಂ ಮಾಳ್ಪಂದು ಪುಟ್ಟಿದವು ತನ್ನಯನ ಜಲದಿಂದ ಶಿಖಿನೊಳೊಂದು ॥ ಪ್ರೇಮದಿಂ ನೆತ್ತಿಯೊಳು ಮೂರ್ಶಿರಕೆ ಷಟ್ತ್ರಿಂಶ । ದಾಮಕ ಹಾಕರಣಕ್ಕೆಯೊಂದೊಂದುಗಳದೊಳು । ದ್ವಾಮದೊತ್ರಿಂಶತ್ತು ರೋಮಮಾಳಿಗೈವತ್ತು ನೂರೆಂಟು ಮುಪವೀತಕೆ ॥೧೫॥ ವರಭುಜದ್ವಯಕೆ ಸದಿನಾಱು ಮಣಿಬಂಧಕ್ಕೆ । ಕರಣಸಂಖ್ಯೆಗಳಕ್ಷಮಾಲೆಗಂ ನೂರೆಂಟು । ಪ

ರಿಗಣನೆಯಿಂದೆ ತತ್ತ್ವಳದೊಳಕ್ಕರಿಂದೀಶಸ್ವರೂಪಮೆಂದು ॥ ಧರಿಸಿ ಶಿರದೊಳು ಕೋಟಿದಶಕೋಟಿ ಕಿವಿಗಳ್ಗೆ । ಪರಮ ಶತಕೋಟಿ ಕಂಠಕೆ ಸಹಸ್ರಂಕೋಟಿ । ಯುರುಬಾಹುಗಳ್ಗೆ ಪ್ರಮಾಣದಫಲಂಹಸ್ತದೊಳು ಧರಿಸೆ ಕೇಳೆಂದನು ॥೧೭॥ ಪರಿಕಿಸಲು ಮೋಕ್ಷಮದು ಪಂಚವಿಂಶತಿ ಮಣಿಯು । ಸರದಿಂದ ಮಷ್ಟವಿಂಶತಿ ಪುಷ್ಟಿಕೇಯಾಲಿ । ಸಿರದೆಯಿಪ್ಪತ್ತೇಳೆನುಳ್ಳ ಸರದಿಂ ಭುಕ್ತಿ ಮೂವತ್ತ ಮೇಲಾರರಿಂ ॥ ಪಿರಿದ ಧರ್ಮಮಹುದು ಮೂವತ್ತೆರಡನುಳ್ಳ ಮಳೆ । ಸರದಿಂದೆ ವಿಜಯಮಪ್ಪದು ಪಂಚದಶಕದಿಂ । ದರಿದೆನಿಸು ಮಾಭಿಚಾರಕಮಹುದು ಕೇಳೆಂದು ಚನ್ನಬಸವನ್ನುಡಿದನು ॥೧೮॥ ಬಿರವೆನಾಲಿಸು ರಾಮ ಪಣವದುತ್ಪತ್ತಿಯಂ । ಪರಶಿವನ ಚಿತ್ತೆ ಚಿತ್ಪ್ರಣವಮಾಯ್ತದರಿಂದ । ಉರುನಾದಬಿಂದುಕಳೆಗಳು ಪುಟ್ಟಿದವು ನಾದಬಿಂದುಕಳೆಗಳು ಕ್ರಮದೊಳು ॥ ಇರದಕಾರೋಕಾರ ಮಕಾರತ್ರಯಂ । ಪರಿಕಿಸಲದೊಂದಾಗಲೊಂಕಾರವೆಂದೆನಿಪ । ಪರತರಪ್ರಣವಮಾದುದು ಪಣವದಿಂ ಪಂಚಲಕ್ಷಣಂ ಜನಿಯಿಸಿದವು ॥೧೯॥ ತಾರಕಂ ದಂಡಕಂ ಕುಂಡಲಮುಮರ್ಧೇಂದು । ಮಾರಯ್ಯ ಬಿಂದುವುಂ ಪಂಚಲಕ್ಷಣಮಿಂತು । ತಾರಕಾಕಾರನ್ನಕಾರಮ್ಮಕಾರವೇ ದಂಡಕಂ ಕುಂಡಲಮದು ॥ ತೋರುವ ಶಿಕಾರಮರ್ಧೇಂದುವೆ ವಕಾರಮದ । ಸೇರಿರ್ಪ ಬಿಂದುವೆ ಯಕಾರಮಿಂತೈದು ಕೇ । ಳ್ತಾರಕಾಬ್ರಹ್ಮವೆಂದೆನಿಪ ಚಿತ್ಪ್ರಣವದಿಂದಾದವವನಿನ್ನಾಲಿಸು ॥೨೦॥ ಪಂಚಾಕ್ಷರಂಗಳಿಂದಾದವೆಲರಾಮ ಕೇ । ಳ್ಪಂಚಸಂಜ್ಞಾಳಿಯಾ ಪಂಚಸಂಜ್ಞಾಳಿಯಿಂ । ಪಂಚನಾದಾಖ್ಯಮಾ ಪಂಚನಾದಾಖ್ಯಮೇ ಪಂಚವದನಂಗಳವರಿಂ ॥ ಪಂಚಕಲೆಯಾದವಾ ಪಂಚಕಲೆಗಳು ಮೆರವ । ಪಂಚಶಕ್ತಿಗಳೆನಿಪರವರಿಂದನಾದವಾ । ಪಂಚಭೂತಂಗಳವರಿಂ ಪಂಚವಿಂಶತಿಸು ತತ್ತ್ವಂಗಳುದಯಿಸಿದವು ॥೨೧॥ ಇಂತೆ ಸವಪಣವ ಪಂಚಾಕ್ಷರೀಮಂತ್ರವಿದ । ನಂತಮುಗಣಿತಕೋಟಿಮಂತ್ರಕ್ಕಮಾತೆಯಿದು । ಸಂತತಂ ಜಪಿಸುವಂ ಸಾಕ್ಷಾಚ್ಛಿವಂ ಸಿದ್ಧರಾಮ ಕೇಳೀಮಂತ್ರದಿಂ ॥ ಮುಂತೆ ಸಕಲೋಪಕರಣಂಗಳಂ ಶುದ್ಧಿಯಂ । ಸಂತಸದಿ ಮಾಡಿ ತದನಂತರದಿ ಶಿವಪೂಜೆ । ಯಂತಧಿಕಭಕ್ತಿಯಿಂ ಮಾಳ್ಪುದದರಿರವನೀಂ ಕೇಳೆಂದು ನಿರವಿಸಿದನು ॥೨೨॥ ಹರುಷದಿಂದರ್ಘ್ಯಪಾದ್ಯಾಚಮನಂಗಳಿಂ । ದಿರದೆ ಗಂಧೋದಕಂ ಪುಷ್ಪೋದಕಂ ಸವಿಸ್ತರದ ಮಂತ್ರೋದಕಂ ಸ್ವರ್ಣರತ್ನೋದಕಾದ್ಯಖಿಳೋದಕಂಗಳಿಂದಂ ॥ ಪರಿಕಿಸಲು ಪಂಚಾಮೃತಾಭಿಷೇಕಂಗಳಿಂ । ಪವಿ

ಡಿಯೊಳಭಿಷೇಕವನ್ಮಾಡಿಬಳಿಕತ । ತ್ಪದವುಪಾದೋದಕಂಗೊಂ
ಬುದೆನಲದನೆನಗೆವಿಸ್ತರಿಸಿಪೇಳೆಂದನು ‖ ೩೩ ‖ ಆದೊಡಿನ್ನಾಲಿಸೆಲೆ
ಶಾಮೇಶನೀಂಕೇಳ್ದು । ಪಾದೋದಕಂಗಳಿರವೆಂತೆನಲು ತಾಂ ತ್ರಿವಿ
ಧ । ಭೇದದಿಂವರ್ತಿಸುಗುಗುರುವಿನಸುಪಾದೋದಕಂ ತಿಳಿಯೆಸುಕರು
ಣಾಜಲಂ ‖ ಸಾದರದೊಳೀಮುಖಲಿಂಗದಿಂದಾದತ । ತ್ಪಾದೋದ
ಕಂವಿನಯಜಲವುಮುಳಜಂಗಮದ । ಪಾದೋದಕಂಸಮತೆಜಲವೆಂದ
ಕರುಣದಿಂಚೆನ್ನಬಸವಂಪೇಳ್ದನು ‖ ೩೪ ‖ ಗುರುಲಿಂಗಜಂಗಮದಪಾ
ದೋದಕಂಗಳಿಂ । ಪರಿವಿಡಿಯ ಸಂಚಿತಂಪ್ರಾರಬ್ಧವಾಗಾಮಿ । ಯುರು
ತರದಕರ್ಮಂಗಳಿರದೆಪೋಪವುಕೇಳ್ವುದೆನಲದರಭೇದಂಗಳ ‖ ವಿರಚಿ
ಸೆನೆಡನನದಜ್ಞಾನಮಂಕಳೆದುಸ । ತ್ಪರಮಸುಜ್ಞಾನಮಂಕೊಡುವು
ದೇಸಂಚಿತಂ । ನಿರುತದಿಂದಿಹಲೋಕಭೋಗಮಂಬಿಡಿಸಿಶಿವಲೋಕ
ಪದಮಂಕೊಡುವುದೆ ‖ ೩೫ ‖ ಪರಿಕಿಸಲುಪ್ರಾರಬ್ಧವಿದುಭವಭ
ವಾಂತರದಿ । ಬರಲೀಯದಿಹಪರಕ್ಕೆಡೆಯಾದಗೊಡವಾಗ । ಪರಶಿವ
ನೊಳೊಂದಿಸುವುದಾಗಮಾಕೇಳಿನ್ನು ತ್ರಿವಿಧೋದಕಂಗಳಿರವ ‖ ಪರ
ಮಪಂಚಾಕ್ಷರೀಮಂತ್ರದಿಂತನ್ನಮನ । ಗಿರದೆತಂದುದೆ ಸುಮಂ
ತ್ರೋದಕಂತಜ್ಜಲದಿ । ಹರುಷದಿಂದಿಷ್ಟಲಿಂಗಕೆಮಜ್ಜನಕ್ಕೆರದುದೇಪ
ರಮಪಾದೋದಕಂ ‖ ೩೬ ‖ ಅಂಗಕೆಸಮರ್ಪಿಸಿದುದೇಪ್ರಸಾದೋ
ದಕಂ । ಹಿಂಗದೀತ್ರಿವಿಧೋದಕಂಗಳಿಂಮಾಳ್ಪಕ । ಜ್ಜಂಗಳಂಪೇಳ್ವೆ
ನೀಮಂತ್ರೋದಕದೊಳಿಪಾಕಪ್ರಯುಕ್ತಂಗೈವುದು ‖ ಮಂಗಳವ
ನಿಪ್ಪಪಾದೋದಕದೆಮುಖಮಜ್ಜ । ನಂಗೈವುದೀಪ್ರಸಾದೋದಕವ
ನೀಂಟುವುದು । ಅಂಗವಂತಂಗವೇಮುಖ್ಯಮಿನ್ನಾಲಿಸೈಲಿಂಗಪೂ
ಜಾವಿಧಿಯನು ‖ ೩೭ ‖ ಅಷ್ಟವಿಧಪೂಜೆಯಿಂದುಪಚಾರಷೋಡಶ
ದೊ । ಳಿಷ್ಟಲಿಂಗವನೆಪೂಜಿಸಿಮಹಾಭಕ್ತಿಯಿಂ । ಮೃಷ್ಟಾನ್ನಮಂಸ
ಮರ್ಪಿಸಿತತ್ಪ್ರಸಾದಮಂಸುಯಿವಾನದಿಂದೆಕೊಡೆ ‖ ಸಿಷ್ಟಯಿಂಸವಿ
ದುತದ್ರವಮನಿದಂಗಕ್ಕೆ । ಸೃಷ್ಟಮಾನಸನಾಗಿಲೇಪಿಸುವದೆನೆಕೇ
ಳು । ತೆಷ್ಟವಿಧಮಾಪ್ರಸಾದಂತಿಳಿಯಪೇಳ್ವುದೆನೆಕೃಪೆಯೊಳೊ
ಲಿದಿಂತೆಂದನು ‖ ೩೮ ‖ ಸಿದ್ಧರಾಮೇಶಕೇಳ್ವುದುತತ್ಪ್ರಸಾದಮದು ।
ಶುದ್ಧಸಿದ್ಧಪ್ರಸಿದ್ಧಮುದೆಂದುಮೂರುತೆರ । ಶುದ್ಧವೇಗುರುಭಕ್ತಶೇ
ಷಮಾಶಿವಲಿಂಗಕರ್ಪಿಸಿದುದೇತಿಳಿಯಲು ‖ ಸಿದ್ಧಮದುಜಂಗಮಸು
ಭುಕ್ತಶೇಷಪಸುಪ್ರ । ಸಿದ್ಧಮೆನೆಕೇಳ್ದೆಲ್ಲಮಂತಿಳಿಯಪೇಳ್ದೆನ್ನ ।
ಶುದ್ಧರಿಸಿದೈಗುರುವಶಿವಪೂಜೆಯಮಾಡುವಂದಮಂಪೇಳೆಂದನು ‖

ಆದೊಡೀ ಶಿವಪೂಜೆಯುಂ ಮಾಳ್ಪುದೀ ತ್ರಿವಿಧ| ಭೇದಮುವು ರಾಜಸಂ
ತಾಮಸಂ ಸಾತ್ತ್ವಿಕಂ| ವೇದಾಗಮಂಗಳಂ ಮನ್ನಿಸದೆ ಮನಕೆ ಬಂದಂತ
ರ್ಚಿಪುದೆ ರಾಜಸಂ || ವೇದಾಗಮಂಗಳಹುದೆಂದುವಲ್ಲೆಂದುದಂ| ಮಾ
ಟ.ಮನಬಂದಂತೆ ಪೂಜಿಪುದೆ ತಾಮಸಂ | ವೇದಾಗಮೋಕ್ತಿಯಿಂ ಭ
ಕ್ತಿಯಿಂದರ್ಚಿಪುದೆ ಸಾತ್ತ್ವಿಕಮೆಂದರಿವುದು ||೨೦|| ಇನ್ನಾಲಿಸೈ
ಶುದ್ಧಮಿಶ್ರಸಂಕೀರ್ಣಮಂ | ಉನ್ನತಜ್ಞಾನಪೂಜಾವಿಧಿಯನೊಲವಿ
ನಿಂ| ತನ್ನ ಲಿಂಗದೊಳೆಸೆವ ಖಂಡಪರಿಪೂರ್ಣತೇಜೋರಾಶಿಯೆನಿಪ
ಶಿವನಂ || ನನ್ನಿಯಿಂ ಭಾವಿಸುತ್ತರ್ಚಿಪುದೆ ಶುದ್ಧಮಿರ | ದನ್ನೋಡೆ
ತಲ್ಲಿಂಗದಿಂ ಪಂಚಮುಖಮೆಸೆವ | ಸನ್ನುತಾಕ್ಷಿಗಳು ಪದಿನೈದುದಶ
ಬಾಹು ಶುದ್ಧಸ್ಫಟಿಕಸಂಕಾಶದ ||೨೧|| ಪರಸದಾಶಿವನೆಂದು ಭಾವ
ದಿಂತಿಳಿದುಸು | ಸ್ಥಿರದಿಂದೆ ಪೂಜಿಪುದೆ ಮಿಶ್ರಮಾ ಲಿಂಗದಿಂ| ದುರುಶ
ಕ್ತಿಸಹಿತೆ ಪರಿಯುಜಸುರೇಂದ್ರಾದಿದಿವಿಜರನಡುವೆ ಕಂಗೊಳಿಸುವ||
ಪರಮಮಾಹೇಶನಂ ಭಾವಿಸುತ್ತರ್ಚಿಪುದೆ | ನಿರುತದಿಂ ಸಂಕೀರ್ಣ
ಮೆಲೆ ರಾಮ ಕೇಳಿನ್ನು | ಹರುಷದಿಂ ಕರ್ಮಭಕ್ತಿಜ್ಞಾನಪೂಜಾವಿಧಾನಂ
ಗಳಂ ಪೇಳ್ವೆನು ||೨೨|| ಇರದೆ ವರ್ಣಾಶ್ರಮಸುಧರ್ಮಕರ್ಮಂಗಳಂ|
ಬೆರಸಿಕೊಂಡೊಲವಿನಿಂ ಫಲಪದಂಗಳ ಬಯಸಿ | ಪರಿಕಿಸಲುಪಾಧಿ
ಯಂ ಮುಂದಿಟ್ಟುಕೊಂಡು ಪೂಜಿಸುವುದೇ ಜಡಕರ್ಮವು || ಪರಮ
ವರ್ಣಾಶ್ರಮಸುಧರ್ಮಕರ್ಮಂಗಳಂ | ಪರಿಹರಿಸಿ ಭವಿಭಕ್ತಭೇದ
ಮಂ ತಿಳಿದು ಸ | ದ್ವರಪದಂಗಳ ಬಯಸದರ್ಚಿಪುದು ನಿರುಪಾಧಿಯು
ಜಡಸದ್ಭಕ್ತಿ ಕೇಳ ||೨೩|| ಎಸೆವ ವರ್ಣಾಶ್ರಮಸುಧರ್ಮಕರ್ಮಂ
ಗಳಸ| ವಿಸರಂಗಳಂ ನೇತಿಗಳೆದು ಬಳಿಕೊಲವಿನಂ| ದೊಸೆದು ಸತ್ಫಲ
ಪದಂಗಳ ಮಾರಿ ಪೂಜ್ಯಪೂಜಕಮೆಂದು ತಿಳಿದು || ಜಸನಾದಸಾನು
ಭಾವದೆ ಸಿದ್ಧನಾಗಿರಲು | ಜೆಸುವ ನಿರ್ವಾಣನಿಜಪದವಿಯಂ ದೊಲಿದು
ಪೂ | ಜಿಸುವುದೇ ಸುಜ್ಞಾನಮಿದು ವೆಸದ್ಯೋನ್ಮುಕ್ತಿ ಯೆಲೆ ರಾಮ
ಕೇಳೆಂದನು || ೨೪ || ಪರಮಸದ್ಗುರುಚನ್ನಬಸವೇಶನೀ ನೆನಗೆ |
ಕರುಣದಿಂ ಪೇಳ್ದ ಶಿವಪೂಜಾವಿಧಾನಮಂ | ಪರಿವಿಡಿಯೊಳರಿದು
ಕೃತಕೃತ್ಯನಾದೆಮ್ಮುಂದೆ ಶಿವತತ್ತ್ವಭೇದಂಗಳ || ವಿರಚಿಸಿ ಕೃ
ತಾರ್ಥನಂ ಮಾಡೆಂದು ಬಿನ್ನವಿಸೆ | ಪರಮಕಾರುಣ್ಯದಿಂ ಸಿದ್ಧರಾ
ಮೇಶಂಗೆ || ಪಿರಿದೆನಿಸುವಪುಳ ಶಿವತತ್ತ್ವಮಂ ಪೇಳಲುದ್ಯೋಗಿಸಿ
ದನೀಸೆಂಬೆನು ||೨೫|| ಪೆಂಶಿವಂ ಚಿತ್ತದಿ ಪ್ರವೃತ್ತಿಯಂ ನೆನೆಯಲಂ|
ದುರುತರ ಚಿತ್ತೆ ಚಿಚ್ಛಕ್ತಿಯಾಯ್ತುದರಿಂದೆ | ಪರಮಹಾಲಿಂಗಮಾ

ಯ್ತುದರಿಂದೆ ಪಂಚಕಳೆಯಾದುದಾ ಘನಲಿಂಗವೆ ॥ ಪೆಗವೊಂದುಗೂಢ ವೆಂದುಂ ಶರೀರಸ್ಥವೆಂ। ದುರುಲಿಂಗಸುಕ್ಷೇತ್ರವೆಂದನಾದಿಯುಂ ವೆಂದು । ಪರಿಕಿಸಲು ಪಂಚಸಂಜ್ಞೆಗಳಾದವವನಿನ್ನು ವಿಸ್ತರಿಪೆನಾಲಿಸೊಲಿದು ॥೩೬॥ ಪರವೆಂದು ಸಕಲತತ್ವಂಗಳೇತಾನೆತ । ತ್ವಪರತತ್ವವಾದಕಾರಣದಿಂದೆಪರನಾದು। ದಿರದೆತಾಂ ಮೂರ್ತಿಯಿಲ್ಲದೆ ಸಕಲಮೂರ್ತಿಯುಂ ತನ್ನಿಂದಲೇ ಪುಟ್ಟಿವು॥ ಪರಿಕಿಸಲು ಗೋಪ್ಯದಿಂದಿರೆ ಗೂಢವೆಂನಿಸಿತಂ । ದುರು ಸಕಲಸಚರಾಚರಂಗಳಂ ಸೃಜಿಸಿಮು। ತ್ತಿರದವಕ್ಕಾಧಾರವಾಗಲು ಶರೀರಸ್ಥವೆಂದೆನಿಸಿತೊಲವಿನಿಂದಂ॥೩೭॥ ಕಂಗೊಳಿಪ ಸಕಲಸಚರಾಚರಂಗಳನೆತಂ। ನಂಗದಿಂ ಸೃಜಿಸಿ ವಿಲಯಕ್ಕೆ ಕಾರಣಮಾದ। ತುಂಗಸುಕ್ಷೇತ್ರವೆಂದೆನಿಪ ಕಾರಣದೆ ಲಿಂಗಕ್ಷೇತ್ರವೆಂದೆನಿಸಿತು ॥ ಹಿಂಗದೆ ಶಿವಾಪರುದಾತ್ರಾಂತವಾದಖಿಳತ । ತ್ವಂಗಳಿಗೆ ತಾನನಾದಿಯುಮೆನಿಪ ಕಾರಣಂ। ಮಂಗಳಮೆನಿಪ್ಪನಾದಿಯುಮೆನಿಸಿತೆಲೆ ಸಿದ್ಧರಾಮೇಶ ಕೇಳೆಂದನು॥೩೮॥ ಒರವೆನಾಲಿಸು ಪಂಚಕಳೆಯನಾಮಂಗಳಂ । ಪರಮಶಾಂತ್ಯಾತೀತೆ ಶಾಂತಿಯುರುವಿದ್ಯಾಮು। ತ್ತಿರದಾ ಪ್ರತಿಷ್ಠೆಸುನಿವೃತ್ತಿಯೆನಿಸುವ ಕಳಾಶಕ್ತಿಯರಿವೈದು ಮೊದಲ ॥ ವಿರಚಿಸಿದ ಪಂಚಸಂಜ್ಞೆಗಳೆನಿಸುತಿಹ ಮಹಾ। ಪರಮ ಸಾದಾಖ್ಯಂಗಳೈದು ಪರಶಿವನೊಂದು । ಪರಿಕಿಸಲು ಪನ್ನೊಂದು ಶಿವತತ್ವಮೆಲೆ ಸಿದ್ಧರಾಮೇಶ ಕೇಳೆಂದನು॥೩೯॥ ಅಂಗತತ್ವಂಗಳಿಪ್ಪಪನ್ನೊಂದು ಮೊದಲೆನಿನ । ಗಂಗತತ್ವಂಗಳಿಪ್ಪತ್ತೈದವೇಳ್ದೆನುಭ । ಯಂಗಳೇ ಷಟ್ತ್ರಿಂಶತತ್ವಂಗಳೆಲೆ ರಾಮಕೇಳೆಂದು ಪೇಳಲಂದು ॥ ಮಂಗಳಾತ್ಮಕಮಹಾಗುರುವೆನೀಂ ಪೇಳ್ದ ತ । ತ್ವಂಗಳಂ ಕೇಳ್ದು ಕೃತಕೃತ್ಯನಾದೆಂ ಷಟ್ಸ್ಥಲಂಗಳಪೇಳಿನ್ನು ರಕ್ಷಿಸುವದೆನೆ ಚನ್ನಬಸವೇಶನಿಂತೆಂದನು ॥೪೦॥ ಇಂತೆಸವ ಚನ್ನಬಸವೇಶ್ವರಪುರಾಣಮಂ । ಸಂತಸದಿ ಬರದವರ್ಗೋದಿದರ್ಗರ್ಥವಾ। ದ್ಯಂತಮಂ ಬಿಡದೆ ಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸುಖಮಂ ಸಕಲಭೋಗಮಂ ನ । ನಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ । ಕಂತುಹರ ನಪರಾವತಾರನೆನಿಸುವ ಚನ್ನಬಸವೇಶನಳ್ಕರಿಂದಂ ॥೪೧॥

ಐದನೆಯ ಕಾಂಡದಲ್ಲಿ ೭ನೇ ಸಂಧಿ ಮುಗಿದುದು.

ಅಂತು ಸಂಧಿ ೬೦ಕ್ಕಂ ಪದ ೨೬೬೬ಕ್ಕಂ ಮಂಗಳ.

## ೮ನೇ ಸಂಧಿ.

ಸೂಚನೆ॥ ಷಟ್ಸ್ಥಲಬ್ರಹ್ಮಯಹಚನ್ನಬಸವೇಶ್ವರನ । ಷಟ್ಸ್ಥಲವನಿರವಿಸೆನೆಸಿದ್ಧರಾಮೇಶಂಗೆ । ಷಟ್ಸ್ಥಲಬ್ರಹ್ಮೋಪದೇಶವುಮಂಮಾಡಿದಂಸಕಲಶರಣರುತಿಳಿವೊಲು॥

ಪದ॥ ಈಶ್ವರಿಯನಿರ್ಮಲಾನನಸರೋರುಹಮಿತ್ರ। ಶಾಶ್ವತಂಸರ್ವಸಾಕ್ಷಿಕಸುಭಸ್ಮೋದ್ಗಾತ್ರ। ವಿಶ್ವಾಧಿಕೋರುದ್ರಭವಗಣಾಂಬುಧಿಭೈತ್ರಸನ್ಮುನಿಸ್ತೋತ್ರಪಾತ್ರ॥ ಭಾಸ್ವತ್ಸ್ವಲೀಲಾವಿಲಾಸನಾಟಕಸೂತ್ರ । ವೈಶ್ವಾನರೋವಿಧುವಿವಸ್ವಾನುಗುಣನೇತ್ರ। ನೈಶ್ವರ್ಯಮಂಕೊಟ್ಟುಸಲಹುಧನಪತಿಮಿತ್ರವಿಮಲಸದ್ಗುಣಚರಿತ್ರ॥೧॥ ಎಲೆಸಿದ್ಧರಾಮೇಶಕೇಳಿನ್ನುಮುಂದೆಷಟ್ಸ್ಥಲಸುಮಾರ್ಗವನುಮಹದಾದಿತತ್ವಂಗಳ್ಗೆ। ನೆಲೆಯಾಗಿಪ್ರಕೃತಿಪುರುಷಾತ್ಮಕದವಿಶ್ವಕ್ಕೆಲಯಜನ್ಮಭೂಮಿಯೆನಿಸಿ॥ ವಿಲಸಚ್ಚಿದಾನಂದನತ್ಯತೃಪ್ತದ್ಧಶಾಂ । ಗುಲನದ್ವಿತೀಯಂಪರಬ್ರಹ್ಮವೆನಿಪಸ।ರ್ಮಲನಾದಪರಶಿವಂತಾನಿರಲದೇಮಹಾಸ್ಥಲವೆಂಬಪೆಸರಾದುದು॥೨॥ ಎಸವಪರಶಿವನೆತನ್ನೊಳುಲೀನವಾಗಿರ್ಪಜಸುವಚಿಚ್ಛಕ್ತಿಯುಸ್ಫುರಣೆಯಿಂದಿರದೆಸಂ। ತಸದೊಳಾಸೇವ್ಯಸೇವಕಭೇದದಿಂದೆಲಿಂಗಾಂಗವೆಂದುಭಯವಾಯ್ತು॥ ಮಿಸುಪಲಿಂಗವೆಸೇವ್ಯನಂಗವೇಸೇವಕನ। ದೆಸಕದಿಂದಾದುದಾಪರತತ್ವವೊಂದೆಭಾ। ವಿಸಿನೋಡೆಲಿಂಗಸ್ಥಲಾಂಗಸ್ಥಲಂಗಳೆಂದೆರಡಾಯ್ತುಕೇಳೆಂದನು॥೩॥ ಪರಮಲಿಂಗತ್ವಮಂಗತ್ವಂಶಿವತ್ವಮಂ। ಬರದೆಪರಮಾತ್ಮತ್ವವೆಂಬೀವಿಭೇದದಿಂ। ಪರಿಯಾಯಗುಣನಾಮದಿಂದೆಸುಸ್ಥಲವೆಂಬಸಂಜ್ಞೆಯಾಶಿವತತ್ವವೆ॥ ಪರಿವಿಡಿಯೊಳೆರಡಾಗಲಾಮಹಾಶಕ್ತಿತಾ। ನೆರಡಾದೊಡೆಂತೆನಲ್ಪ್ರಸನ್ನಸ್ವತಂತ್ರದಿಂ । ಪರಶಿವಸಮಾನಧರ್ಮಂಗಳಿಂಲಿಂಗಾಂಗವೇನಿಜನಿವಾಸಮಾಗ॥೪॥ ಪರಮಲಿಂಗಸ್ಥಲವನಾಶ್ರಯಿಸಿದಾಶಕ್ತಿ। ಪರೆಯೆನಿಸಿಕೊಂಡುದಂಗಸ್ಥಲವನಾಶ್ರಯಿಸಿ।ಯಿರುವಶಕ್ತಿಯೆಭಕ್ತಿಯೆನಿಸಿತ್ತುಸಿದ್ಧರಾಮೇಶನೀಂಕೇಳ್ವುದಿನ್ನು॥ ಉರಿವವಹ್ನಿಜ್ವಾಲೆಭೇದವಡೆದಾಗವಿ । ಸ್ಫುರಿಸಿತೋರುವಜ್ಯೋತಿಯಾದಂತೆಪರಶಿವನ। ಪರಮಚಿತ್ತೇಶಶಕ್ತಿ ಭಕ್ತಿಯಾಯ್ತೆಲೆಸಿದ್ಧರಾಮೇಶಕೇಳೆಂದನು॥೫॥ ತಿಳಿಯಲನಲಜ್ವಾಲೆಧೂಮದಾವರಣದಿಂ । ಬೆಳಗದೆತಮೋಮಯದೊಳಿರ್ಪಂತೆಶಕ್ತಿತಾ । ನೊಲವಿನಿಂದಹುದುವಾಸನೆವಿಡಿದುಶಕ್ತಿನಿರ್ವಾಸನೆಯೊಳಿಹುದೆಂತೆನೆ ॥ ಬೆಳಗಿನಿಂದೆಸವನಿರ್ಮಲಿನದೀಪಿಕೆಯೆಂತೆ। ಹೊಳೆವಘನಸಚ್ಚಿದಾನಂದಸ್ವರೂಪಮಂ।

ಗಳೆಮನಿಪೆಭಕ್ತಿಯಾಶಕ್ತಿಗಿಂದಧಿಕವೆಂದರಾಮೇಶಕೇಳೆಂದನು ॥೬॥
ಶಕ್ತಿಪ್ರವೃತ್ತಿಮಾರ್ಗವನುಳ್ಳದಾವಿಮಲ । ಭಕ್ತಿಯೆನಿವೃತ್ತಿ ಮಾ
ರ್ಗವನುಳ್ಳದಾಪರಮ । ಶಕ್ತಿಮಾಯಾಪ್ರಪಂಚವುಳ್ಳದಾಭಕ್ತಿಯಾ
ಮಾಯಾಪ್ರಪಂಚರಹಿತ ॥ ಶಕ್ತಿಪುಣ್ಯಫಲಪ್ರದಂಗಳಂಕೊಡುವು
ದಾ। ಭಕ್ತಿಶಿವನಲ್ಲಿಯುಕ್ತಮಮಾಳ್ಪುದಾಪರಮ । ಶಕ್ತಿತಾನೆಯ
ಧೋಮುಖಿಭಕ್ತಿಯೂರ್ಧ್ವಮುಖಿರಾಮೇಶಕೇಳೆಂದನು ।೭॥ ಎ
ಸವಲಿಂಗಸ್ಥಲದಿಶಿವನೆನಿಸಿಕೊಳುತೆಸಂ। ತಸದಿಂದುಪಾಸ್ಯವಾಗಿರು
ತಿರ್ಪುದಾಶಕ್ತಿ । ಮಿಸುಗುವಂಗಸ್ಥಲದಿಜೀವನೆನಿಸಿತ್ತುಪಾಸಕವಾ
ಗಿಭಕ್ತಿಯುಹುದು ॥ ಪಸರಿಸುವಲಿಂಗಸ್ಥಲಾಂಗಸ್ಥಲಂಗಳೆಂ । ದೆಸೆ
ದುಭಯಸಂಗಮೆಸಿವೈಕ್ಯವಾಶಿವನೆಭಾ । ವಿಸಿನೋಡೆಮೂರು ತೆರ
ನಾದನೆಲೆಸಿದ್ಧರಾಮೇಶನೀಂಕೇಳೆಂದನು ॥೮॥ ವೇದಮಂತ್ರಕ್ರಿಯೆ
ಗಳಿಂಬಳಿಕಾಕ್ಷಮಹಾ । ನಾದಬಿಂದುಂಕಳೆಗಳಿಂಲಿಂಗವೇತ್ರಿವಿಧಭೇ
ದದಿಂಭಾವಲಿಂಗಂಪ್ರಾಣಲಿಂಗಮೆಂದಿಷ್ಟಲಿಂಗಂಗಳೆಂದು ॥ ಆದುದಾ
ಭಾವಲಿಂಗಮೆನಿಷ್ಕಲಂಮಹ। ತ್ತಾದತತಾಪ್ರಾಣಲಿಂಗಮೆಸಕಲನಿಷ್ಕ
ಲಂ। ಭೇದಿಸಲ್ಕಿಷ್ಟಲಿಂಗಮೆಸಕಲಮೆಲೆಸಿದ್ಧರಾಮೇಶಕೇಳೆಂದನು॥೯॥
ತಿಳಿಯೆಸದ್ರೂಪಮೇಭಾವಲಿಂಗಂಮನಕೆ। ಹೊಳೆವಚಿದ್ರೂಪಮೆಪ್ರಾ
ಣಲಿಂಗಂಕಣ್ಗೆ। ಬೆಳಗುವಾನಂದಮೇಯಿಷ್ಟಲಿಂಗಂಬಳಿಕ್ಕಸಿಪದಮೆಭಾ
ವಲಿಂಗಂ ॥ ನೆಲೆಮೆತತ್ತ್ವಂಪದಮೆಪರಣಲಿಂಗಂಸುನಿ । ಶ್ಚಲವಾದತ
ತ್ತ್ವದಮದಿಷ್ಟಲಿಂಗಮಹಾ । ಸ್ಥಲವಾದತತ್ತ್ವಮಸಿಯೆಂಬುದೇತ್ರಿವಿ
ಧಲಿಂಗಂಗಳಿವು ಕೇಳೆಂದನು ॥೧೦॥ ಎಸವಪರತತ್ತ್ವವೇ ಭಾವಲಿಂ
ಗಂಸೂಕ್ಷ್ಮವೇಸರಾಂತತತ್ತ್ವವೇಪ್ರಾಣಲಿಂಗಂಸ್ಥೂಲ । ದೆಸಕತತ್ತ್ವ
ವೇತಿಳಿಯಲಿಷ್ಟಲಿಂಗಂ ಸ್ಥೂಲತತ್ತ್ವವೇ ಹೊರಗೆನಿಸಿತು ॥ ಪಸರಿ
ಸುವಸೂಕ್ಷ್ಮ ತತ್ತ್ವಮೆತಾನೆಯೊಳಗೆನಿಸಿ । ತಸಮಪರ ತತ್ತ್ವ
ವೇನೋಡಲಡೆವಿಡದೆರಾ । ಜಿಸುವಖಂಡಿತಮೆನಿಸಿತಿಂತಪ್ಪಮೂ
ರುಲಿಂಗಂಗಳಿರವಾರಾದವು ॥೧೧॥ ಪರಿವಿಡಿಯೊಳಾಭಾವಲಿಂಗವೇತಿ
ಳಿಯಲಾ । ವರಮಹಾಲಿಂಗಪ್ರಸಾದಾಖ್ಯಲಿಂಗಮೆಂ। ದೆರಡಾಯ್ತು
ಪರಣಲಿಂಗವತಿಳಿಯೆಚರಲಿಂಗಮಂದುಶಿವಲಿಂಗಮೆಂದು ॥ ಯೆರಡಾ
ಯ್ತಿಷ್ಟಲಿಂಗವತಿಳಿದುನೋಡಲಾ । ಗುರುಲಿಂಗಮೆಂದುಬಳಿಕಾಚಾ
ರಲಿಂಗಮೆಂ । ದೆರಡಾಯ್ತುಮೂರುಲಿಂಗಂಗಳಾರಾಗಲಾಶಕ್ತಿತಾನಾ
ರಾದವು ॥೧೨॥ ಹೊಳೆವನಿರ್ಮಳೆನಿತ್ಯಶಾಂತ್ಯತೀತೋತ್ತರಾ।
ಕಳೆಯೆಚಿಚ್ಛಕ್ತಿಶಾಂತಾತೀತೆಯೆಂದೆಂಬ । ಕಳೆಯೆತಾಪರಶಕ್ತಿ

ಶಾಂತಿಯೆಂದೆನಿಸುತಿಹಕಳೆಯು ತಾನಾದಿಶಕ್ತಿ ॥ ಬಳಿಕವಿದ್ಯೆಯೆನಿ
ಪ್ಪಕಳೆಯುದಿಚ್ಛಾಶಕ್ತಿ। ತಿಳಿಯಲುಪ್ರತಿಷ್ಠೆಕಳೆಯೇಜ್ಞಾನಶಕ್ತಿ ಥಳ।
ಥಳಿಸುವನಿವೃತ್ತಿಕಳೆಯೇಕ್ರಿಯಾಶಕ್ತಿಯೆಲೆ ರಾಮೇಶ ಕೇಳೆಂದ
ನು॥೧೩॥ ಇಂತುಚಿಚ್ಛಕ್ತಿಕ್ರಮದಿಂದೆಷಡ್ವಿಧಕಳೆಯು । ಸಾಂತುಷ
ಡ್ವಿಧಶಕ್ತಿಯಾದಳಾಪರಶಿವಂ। ಪಿಂತೆಷಡ್ವಿಧಲಿಂಗವಾಗಿರ್ದಕ್ರಮ
ದೊಳೀಶಕ್ತಿಯರೊಳೊಡಗೂಡಿದ ॥ ಯೆಂತೆಂದೊಡಾದ್ಯಂತಶೂನ್ಯ
ಮಮಲಂಪರಂ । ಸಂತತಂಚಿಚ್ಛಕ್ತಿಸಂಯುತಂಶಿವತತ್ವ । ಮಿಂತಿ
ದೇನಿಷ್ಕಲಂಭಾವಗಮ್ಯಂಮಹಾಲಿಂಗಮಿದುಕೇಳೆಂದನು ॥೧೪॥ ಪ
ರತರಂಜ್ಯೋತಿಸ್ವರೂಪಕಂಜ್ಞಾನಗೋ। ಚರಸಾಪರಾಶಕ್ತಿಸಂಯು
ತಂನಿರ್ಮಲಂ । ನಿರುಪಮಂಸಾದಾಖ್ಯತತ್ವಪ್ರಸಾದಾಖ್ಯಲಿಂಗಮಿ
ದುಕೇಳ್ವುದಿನ್ನು॥ ಪರಿಕಿಸಲುಜ್ಯೋತಿರ್ಮಯಂಸಕಲನಿಷ್ಕಲಂ।
ಪರಮಪುರುಷಂಮನಕಗೋಚರನಮೂರ್ತಕನೆ । ದಿರದಾದಿಶಕ್ತಿ
ಸಂಯುಕ್ತವಿದುಚರಲಿಂಗವೆಲೆರಾಮಕೇಳೆಂದನು ॥೧೫॥ ಥಳಥಳಿಸಿ
ಪೊಳೆವತೇಜೋಮೂರ್ತಿಯಾಗಿಪ । ಜ್ವಲಿಸುತಿಚ್ಛಾಶಕ್ತಿಯೊಡ
ಗೂಡಿವ್ಯಕ್ತದಿಂ। ನಲಿದಹಂಕಾರಕ್ಕೆಗೋಚರಿಸುತಿಪ್ಪುದೇಶಿವಲಿಂಗ
ವಿನ್ನುಕೇಳು ॥ ಲಲಿತತೇಜೋರಾಶಿಯಾಗಿಕರ್ತೃತ್ವಮಂ। ತಳೆದು
ಸುಜ್ಞಾನಶಕ್ತಿಯುಕೂಡಿಬುದ್ಧಿಗಂ। ದೊಲಿದುಗೋಚರಿಪುದೇ ಗುರು
ಲಿಂಗವೆಲೆಸಿದ್ಧರಾಮೇಶಕೇಳೆಂದನು ॥೧೬॥ ಸಕಲತತ್ವಾಶ್ರಯಂನಿ
ತ್ಯಕರ್ಮಾತ್ಮಕಂ। ಪ್ರಕಟಸುವಸತ್ಕ್ರಿಯಾಶಕ್ತಿಯುಕ್ತಂ ನೋ
ಡ,ಲಕಳಂಕಚಿತ್ತಕರಣಗ್ರಾಹ್ಯನಚಲನಾಧಾರನಾಧಿಕಾರೂಢನು॥
ವಿಕರಿಸಿನಿವೃತ್ತಿಮಾರ್ಗಾಭಿಧಾನವನುಳ್ಳ। ಸುಕರವೆನಿಸುವಸದಾ
ಚಾರಲಿಂಗವಿದೆಂದು । ಮುಕುತಿದಾಯಕನೆನಿಪಚನ್ನಬಸವಂಸಿದ್ಧ
ರಾಮಂಗೆನಿರವಿಸಿದನು ॥೧೭॥ ಇಂತೀಮಹಾಲಿಂಗವಾದಿಷಡ್ವಿಧ
ಲಿಂಗ। ಮಂತಾಗತಮ್ಮಷಡ್ವಿಧಶಕ್ತಿಯರಕೂಡಿ । ಸಂತಸದಿಕರಣಷ
ಡ್ವಿಧಗ್ರಾಹ್ಯದಿಂದೆ ತತ್ಸೇವ್ಯದಿಂಬರುತಿರ್ದವು॥ ಮುಂತೆತತ್ಸೇ
ವಕವಿಭೇದದಿಂಮಾತ್ಮತ। ತ್ವಂತಾನೆತನ್ನಸದ್ಭಕ್ತಿಯುವಿಚಿತ್ರದಿನಿ।
ರಂತರಂಯೋಗಾಂಗಭೋಗಾಂಗತೇಗಾಂಗವೆಂದು ತಾಂತ್ರಿವಿಧವಾ
ಯುತ್ತ ॥೧೮॥ ಯೋಗಾಂಗವೆನೆಶಿವನಸಂಯೋಗದಾವಿಮಲ। ಭೋ
ಗಾಂಗವೆನೆಶಿವಂಸಹವಾಗಿಭೋಗಿಪುದು । ತೇಗಾಂಗವೆನೆಶಿವಂಶಿವ
ಖತ್ತರಲ್ಲದನ್ಯರಸಂಗಮಂತ್ಯಜಿಪುದು॥ ಯೋಗಾಂಗವೇಸುಕಾರಣ
ತನುವೆನಿಪ್ಪುದು । ಭೋಗಾಂಗವೇಸೂಕ್ಷ್ಮತನುವೆನಿಪುದಾಮಿಮ

ಲ । ತೇಗಾಂಗವೆನಿಪುದೇಸ್ಥೂಲತನುವೆಲೆಸಿದ್ಧರಾಮೇಶಕೇಳೆಂದ
ನು ‖೧೯‖ ಬಳಿಕಲಾಯೋಗಾಂಗವೇಪ್ರಾಜ್ಞನಾಮನಕೆ । ಹೊಳೆವ
ಭೋಗಾಂಗವೇತೈಜಸಂಕಂಗಳಿಗೆ । ಸುಳಿವತೇಗಾಂಗವೇವಿಶ್ವನಾ
ಯೋಗಾಂಗವೇಸುಷುಪ್ತಿಯೊಳಿರ್ಪುದು ‖ ತಿಳಿಯಲಾಭೋಗಾಂಗ
ವೇಸ್ವಪ್ನದಲ್ಲಿಹಳೆ । ಥಳಿಪುದಾತೇಗಾಂಗವೇಜಾಗ್ರವಿಂತುನಿ । ರ್ಮ
ಳವೆನಿಪ್ಪಂಗತ್ರಯಂಗಳೇತಾಂತ್ರಿವಿದವಸ್ಥೆಗಳೊಳಿರುತಿರ್ಪವು‖೨೦‖
ಯೋಗಾಂಗವೆಂಬುದೇಪರಮಾತ್ಮನಾವಿಮಲ । ಭೋಗಾಂಗವೆಂಬು
ದೇಯಂತರಾತ್ಮಂಮಹಾ । ತೇಗಾಂಗವೆಂಬುದೇಜೀವಾತ್ಮನಿಂತು
ನಾಮಂಗಳಿಂದೆಸವುತಿರ್ಪಂ‖ ಯೋಗಭೋಗತ್ಯಾಗವೆಂಬೀತ್ರಯಾಂ
ಗವೇ । ರಾಗದಿಂದೊಂದೊಂದು ತಮ್ಮೊಳುವಿಲಾಸದಿಂ । ದಾಗಳೆರಡೆರ
ಡಾದವೆಲೆಸಿದ್ಧರಾಮೇಶಕೇಳೆಂದು ನಿರವಿಸಿದನು ‖೨೧‖ ಮಿಸುಪ
ಯೋಗಾಂಗವೆಂದೈಕ್ಯನುಂಶರಣನಂ । ದೆಸೆವಭೋಗಾಂಗವೇಪ್ರಾಣ
ಲಿಂಗಿ । ಪಸಾಬಿಯುಸುರಲೇಂತೇಗಾಂಗವೇಮಹೇಶಂಭಕ್ತನೆಂದು ಷ
ಟ್ಸ್ಥಲವಾದುದು ‖ ಪಸರಿಸುವತನ್ನಸದ್ಭಕ್ತಿಯವಿಚಿತ್ರದೊಂ । ದೆ
ಸಕದಿಂದಂಗವೇಷಟ್ಸ್ಥಲವೆನ್ನಿದೆರಂ । ಜಿಸುವತದ್ಭಕ್ತಿತಾನಾರಾ
ದುದೆಲೆಸಿದ್ಧರಾಮೇಶಕೇಳೆಂದನು‖೨೨‖ಪೆರ್ಮಸಮರಸಭಕ್ತಿಯಾ
ನಂದಭಕ್ತಿವು । ತ್ತಿರದಲನುಭವಭಕ್ತಿಯುವಧಾನಭಕ್ತಿಸು । ಸ್ಥಿರದಿಂ
ದನೈಷ್ಠಿಕಾಭಕ್ತಿಯುದುಸದುಭಕ್ತಿಯೆಂದು ಷಡ್ವಿಧವನಾಂತು ‖ ಪರಿ
ವಿಡಿಯೊಳೈಕ್ಯಸ್ಥಲವನೆಸಮರಸಭಕ್ತಿ । ಶರಣಸ್ಥಲವನೆಮತ್ತಾನಂದ
ಭಕ್ತಿಯಾ । ಪರಿಯೊಳಾಪರಣಲಿಂಗಿಸ್ಥಲವನನುಭಾವಭಕ್ತಿತತ್ಕ್ರ
ಮದೊಳಿನ್ನು ‖೨೩‖ ವರಪಸಾದಿಸ್ಥಲವನವಧಾನಭಕ್ತಿಯಾ । ಪರಿ
ಮಹೇಶಸ್ಥಲವನೈಷ್ಠಿಕಾಭಕ್ತಿವು । ತ್ತಿರದೆಭಕ್ತಸ್ಥಲವನೆಸವಸದ್ಭಕ್ತಿ
ಯಿಂತಂಗಸ್ಥಲಂಗಳಾರು ‖ ಪರಿವಿಡಿಯೊಳಾಭಕ್ತಿತಾನೆಷಡ್ವಿಧರೂಪ ।
ಧರಿಸಿಯೊಡವೆರದಳ್ಯೈಕಾನ್ಯಾದಿಭಕ್ತಾಂತವಾ । ಗಿರುತಿರ್ಪ ಷಟ್ಸ್ಥಲವ
ನೆಲೆಸಿದ್ಧರಾಮೇಶಕೇಳೆಂದು ನಿರವಿಸಿದನು ‖೨೪‖ ಎಲೆಸಿದ್ಧರಾಮೇ
ಶಕೇಳ್ಸ್ವದಿನ್ನಂಗಷಟ್ಸ್ಥಲವಂಪ್ರವೃತ್ತಿಮಾರ್ಗದೊಳ್ದಿಸಿರುದ
ನೊಲಿದು । ಶ್ರೀಳೆವಚಿತ್ಸ್ವಕ್ತಿಯಿಂಶಿವನೇಮಹಾಲಿಂಗವೆನಿಸತತ್ಸ್ವೇ
ವಕದೊಳು ‖ ಬಳಿಕಲೈಕ್ಯಸ್ಥಲವದುಯ್ಯೊಮಹಾಲಿಂಗ । ದೊಳೆಪ
ರಾಶಕ್ತಿಯನುಭವದಿಂಪ್ರಸಾದಾಖ್ಯ । ದಶ್ರೆಮೆರವಲಿಂಗವಾಯ್ತಾದ
ರುಪಾಸಕದೊಳಿಂಶರಣಸ್ಥಲಂಆದುದು ‖೨೫‖ ವರಸುಪ್ರಸಾದಲಿಂಗ
ದಿನಾದಿಭಕ್ತಿಯಂ । ಬೆರಸಿಚರಲಿಂಗವಾಯ್ತಾದರುಪಾಸಕದೊಳಿಂ । ಬ

ರದೆಸತಾ ಪ್ರಾಣಲಿಂಗಿಸ್ಥಲವದಾಯ್ತು ಚರಲಿಂಗದಿಂದುದಿಸಿ ಬಳಿಕ ॥ ನಿ
ರುತದಿಚ್ಛಾಶಕ್ತಿಯಾಗೆ ತತ್ಸಂಗದಿಂ। ಪೆರಿಕಿಸಲು ಶಿವಲಿಂಗವಾಯ್ತಾದ
ರಸೇವಕದಿ । ಪೆರಮಪ್ರಸಾದಿಯುಸ್ಥಲವಾಯ್ತು ಸಿದ್ಧರಾಮೇಶನೀಂ
ಕೇಳೆಂದನು ॥೨೬॥ ಎಸವ ಶಿವಲಿಂಗದಿಂ ಜ್ಞಾನಶಕ್ತಿಯುಕೂಟ । ದೆಸೆ
ಕದಿಂ ಗುರುಲಿಂಗವಾಯ್ತು ತತ್ಸೇವಕದಿ। ಪಸರಿಪ ಮಹೇಶ್ವರಸ್ಥಲವಾ
ಯ್ತು ಲಿಂಗದಿಂ ಕ್ರಿಯಾಶಕ್ತಿಯೊಡನೆ॥ ಬೆಸುಗೆಯಿಂದಾಚಾರಲಿಂಗವಾ
ಯ್ತಾದನುಪಮ । ಜೆಸುವ ಭಕ್ತಿಯೊಳೆ ಭಕ್ತಸ್ಥಲವದಾಯ್ತು ರಾ। ಜಿಸುವ
ವ ಷಡ್ವಿಧಲಿಂಗದಿಂದಲೈಕ್ಯಾದಿ ಭಕ್ತಾಂತ ಷಟ್ಸ್ಥಲವಾದುದು॥೨೭॥
ಪೆರಮ ಷಟ್ಸ್ಥಲವನಾಂತಂಗವೆನಿಪಾತ್ಮನಿಂ। ಬೆರದೆ ಗಗನಂ ಗಗನದಿಂ
ವಾಯು ವಾಯುವಿಂ । ಮರುತಾಪ್ತನಾ ಮರುತಸಖನಿಂದೆ ವಾರಿ ತ
ದ್ವಾರಿಯಿಂ ಪೃಥಿವಿಯಾಯ್ತು॥ ಪರತತ್ವದಿಂದೆ ಭಾವಂ ಭಾವದಿಂ ಜ್ಞಾ
ನ। ವಿರದೆ ಸುಜ್ಞಾನದಿಂ ಮನ ಮನಸ್ಸಿನಿಂ। ದುರುತರದಹಂಕಾರವ
ದರಿಂದೆ ಬುದ್ಧಿಯಾ ಬುದ್ಧಿಯಿಂ ಚಿತ್ತವಾಯ್ತು॥೨೮॥ ಪರಿಯೊಳೈಕ್ಯಸ್ಥ
ಲವೆ ನಿರ್ಮಳಾತ್ಮಂಗವಾ । ಶರಣಸ್ಥಲಂ ತಿಳಿಯೆ ಗಗನಾಂಗವಾಗಲಂ।
ಬಿರದಿ ಸನ್ನು ಪರಣಲಿಂಗಿಸ್ಥಲವೆ ಮರುತಾಂಗವೀ ಕ್ರಮದೊಳಿನ್ನುಮುಂ
ದೆ ॥ ಪರಮಪ್ರಸಾದಿಸ್ಥಲವೆಯನಲಾಂಗವಾ । ವರಮಹೇಶಸ್ಥಲ
ವೆಜಲದಂಗವಿನುಸು । ಸ್ಥಿರದಿಂದಲೆಸವ ಭಕ್ತಸ್ಥಲವೆ ಭೂವ್ಯಾಂಗವೆಂಲೆ
ರಾಮ ಕೇಳೆಂದನು ॥೨೯॥ ಇಂತು ಷಡ್ವಿಧವನಾಂತೈಕ್ಯಾದಿ ಭಕ್ತಸ್ಥ
ಲಾಂತಂಗಳಂ ಕ್ರಮದೊಳೊಂದರಿಂದೊಂದಂಗು । ಣಾಂತರವಿಲಕ್ಷಣಂ
ಗಳ ಬೇರೆ ಬೇರೆ ಪೇಳುವೆನೊಲಿದು ಕೇಳ್ವುದಿನ್ನು॥ ಯೆಂತೆಂದೊಡಾ
ದಿಯೊಳಗಾನು ನೀನೆಂಬ ಭಯ। ವಾಂತಾಮನಃ ಪ್ರಾಣದೇಹೇಂದ್ರಿ
ಯಾದಿಗಳ । ನಂತವೆನೊಳಗುದಿಸವೆಂದರಿದ ಸಮರಸವೆ ತಾನೀಗಡೈ
ಕ್ಯಸ್ಥಲಂ ॥೩೦॥ ಎಸವದೇಹೇಂದ್ರಿಯದ ಪರಿಯಾಯಿಗಳನು ಭಾ। ವಿ
ಸಿ ತನ್ನ ರೂಪೆಂದು ಕಂಡಖಿಳ ವಿಷಯಮಂ। ಹಸನಾಗಿ ಕೂಡಿಕೊಂಡಾ
ನಂದ ಭಕ್ತಿಯಿಂದಿಪ್ಪುದೇ ಶರಣಸ್ಥಲಂ॥ ಮಿಸುಪ ತತ್ವಾಣೇಂದ್ರಿಯಾ
ದ್ಯಗಂ[illegible]ವಮತೆರಾ । ಜಿಸುವವೋಹ ಭ್ರಾಂತಿಗಳನುಳಿದು ಪರಮ
ಸಂ। ತಸದಿಂದೆ ತತ್ವಾನುಭವದೊಳೊಪ್ಪಿಪ್ಪುದೇ ಪರಣಲಿಂಗಿಯ ಸುಸ್ಥ
ಲಂ॥೩೧॥ ಆವದೊಂದಿಂದ್ರಿಯದ ಸುಖವನೆಲ್ಲವ ತನುವ । ನಾವರಿಸು
ವದರಿಂದೆ ಮುನ್ನ ಲಿಂಗಕೆ ಕೊಟ್ಟು। ಸಾವಧಾನದ ಭಕ್ತಿಯಿಂದದಂ ಕೈ
ಕೊಂಬುದೇ ಸುಪ್ರಸಾದಿಸ್ಥಲಂ॥ ಆವಗಂ ಕೃತನಿಯಮ ನಿತ್ಯಕ ವರ್ಣಾ
ದಿವಿವಿ, ಧಾವಳೀ ಕ್ರಿಯಗಳಿಗಸಾಧ್ಯನೆಂದರಿದು ಸ । ದ್ಭಾವದಿಂ ಶಿವ

ಲಿಂಗನಿಷ್ಠೆಯಿಂ ಸುಖಿಪ್ಪ ದೇವರ ಮಹೇಶಸ್ಥಲಂ ||೨೧|| ಪರಿಕಿ
ಸೆ ಶರೀರಂ ತತ್ತ್ವ ಪ್ರಾಣಧರ್ಮಂಗಳಂ | ಸ್ಥಿರವೆಂದು ತಿಳಿದು ಸತ್ಕ್ರಿಯೆಗಳಂ
ಬೆಲ್ಲವಂ| ಪರಿಹರಿಸಿ ವಿಮಲ ಸದ್ಭಕ್ತಿಯಿಂದಾವಾಗಲಿಪ್ಪ ದೇಭಕ್ತಸ್ಥ
ಲಂ || ಪರಿವಿಡಿಯೊಳಿಂತೆಸವ ಷಡ್ವಿಧಾಂಗಸ್ಥಲದ | ಪರಿಯಾಯಗು
ಣನಾಮಲಕ್ಷಣವಿದೆಂದಾಗ | ಕರುಣದಿಂ ಚನ್ನಬಸವೇಶ್ವರಂ ಸಿದ್ಧ
ರಾಮೇಶಂಗೆ ನಿರವಿಸಿದನು ||೨೨|| ಇಂತು ಷಡ್ವಿಧವನಾಂತಂಗಸ್ಥಲಂಗ
ಳಂ| ಪಿಂತೆ ಷಡ್ವಿಧವಾಂತ ಲಿಂಗಸ್ಥಲಂಗಳಂ | ಸಂತಸದುಪಾಸ್ಯ ಪಾ
ಸಕ ಸೇವ್ಯ ಸೇವಕನು ಪೂಜ್ಯ ಪೂಜಕ ಭಾವದಿಂ || ಅಂತರಿಸವಾತ
ಮ್ಮ ಭಕ್ತಿಯ ವಿಲಾಸದಿಂ | ದಂತಳೆದು ತಮ್ಮ ಹಸ್ತಂಗಳಿಂದರ್ಚಿಸಿದ|
ರಿಂತಿದರ ಸಂಸ್ಥಿತಿಗಳಾಗ್ಯಂತ ಲಕ್ಷಣಂಗಳನೊರವೆನಾಲಿಸಿನ್ನು ||೨೪||
ತಿಳಿವುದಿಂ ನೈಕ್ಯಂಗೆ ಸದ್ಭಾವ ಹಸ್ತವಂ | ದಳವಟ್ಟ ಶರಣಂಗೆ ಸುಜ್ಞಾನ
ಹಸ್ತವಿಂ | ನೊಲಿದು ಸತ್ಪ್ರಾಣಲಿಂಗಿಗೆ ಸುಮನಹಸ್ತವಾ ಸುಪ್ರಸಾದಿ
ಗೆ ಭಾವಿಸೆ|| ಪೊಳೆವ ನಿರಹಂಕಾರ ಹಸ್ತಂ ಮಹೇಶಂಗೆ, ಸಲೆ ಸುಬುದ್ಧಿ
ಯೆ ಹಸ್ತವಿನ್ನು ಭಕ್ತಂಗೆ ಥಳೆ | ಥಳಿಸುವ ಸುಚಿತ್ತವೇ ಹಸ್ತವೆಲೆ ಸಿದ್ಧ
ರಾಮೇಶನೀಂ ಕೇಳೆಂದನು ||೨೫|| ತಿಳಿಯಲಾತ್ಮಾಂಗದೊಳು ಸದ್ಭಾ
ವಹಸ್ತದಿಂ| ಪೊಳೆವ ಸಮರಸ ಭಕ್ತಿಯಿಂದೆ ಚಿಚ್ಛಕ್ತಿಯೊಳು | ಬೆಳ
ಗುವ ಮಹಾಲಿಂಗಮಂ ಧರಿಸಿ ಪೂಜಿಸುವನೇ ಪರಮ ಲಿಂಗೈಕ್ಯನು|| ಬ
ಳಿಕ ಗಗನಾಂಗದೊಳು ಸುಜ್ಞಾನ ಹಸ್ತದಿಂ | ತೊಳಗುವಾನಂದಭಕ್ತಿ
ಯೊಳೆ ಪರಶಕ್ತಿಸಂ | ಮಿಳಿತ ಪ್ರಸಾದಲಿಂಗವ ಧರಿಸಿ ಪೂಜೆಯ ಮಾ
ಡುವಾತನೆ ಶರಣನು ||೨೬|| ಸ್ವಸನಾಂಗದೊಳು ಸುಮನ ಹಸ್ತದಿಂ
ಪರಮಸಂ| ತಸದಲನುಭವ ಭಕ್ತಿಯಿಂದಾದಿಶಕ್ತಿಯೊಳು | ಬೆಸಗ
ಯಿಂದಿರ್ಪ ಚರಲಿಂಗಮಂ ಧರಿಸಿ ಪೂಜಿಸುವನೆ ಪ್ರಾಣಲಿಂಗಿ || ಮಸು
ಗುವನಲಾಂಗದೊಳಹಂಕಾರ ಹಸ್ತದಿಂ | ಪಸರಿಪ ವಧಾನ ಭಕ್ತಿಯೊ
ಳಗಿಚ್ಛಾಶಕ್ತಿ| ಯೊಸೆದು ಕೂಡಿರ್ಪ ಶಿವಲಿಂಗಮಂ ಧರಿಸಿ ಪೂಜಿಸುವ
ನೆ ಪ್ರಸುಪ್ರಸಾದಿ ||೨೭|| ವರಜಲಾಂಗದೊಳಾ ಸುಬುದ್ಧಿಯುರುಹ
ಸ್ತದಿಂ| ಪರಮನಿಷ್ಠಾಭಕ್ತಿಯಿಂ ಜ್ಞಾನಶಕ್ತಿಯೊಳು | ಬೆಸಸುಖದಿಂ
ದಿರ್ಪ ಗುರುಲಿಂಗಮಂ ಧರಿಸಿ ಪೂಜಿಪನೆ ಮಾಹೇಶನು|| ಧರಣಿಯಂಗ
ದೊಳಾ ಸುಚಿತ್ತದುರುಹಸ್ತದಿಂ | ಬಿರದೆ ಸದ್ಭಕ್ತಿಯಿಂದಾ ಕ್ರಿಯಾಶ
ಕ್ತಿಯೊಡ | ವೆರಸಿನಾಚಾರಲಿಂಗವ ಧರಿಸಿ ಪೂಜೆಯಂ ಮಾಡುವಾತ
ನೆ ಭಕ್ತನು||೨೮|| ಅಂಗದೀಪರಿಯೊಳೈಕ್ಯಾದಿ ಭಕ್ತಾಂತವಾ| ಲಿಂಗಂ
ಗಳಂ ಧರಿಸಿ ಪೂಜಿಸುವರಿಂತಿದೇ| ಲಿಂಗಾಂಗಸಂಯೋಗವೆಂದೆನಿಪ್ಪುದದ

ರಪರಿಯಾಯಮಂಪೇಳ್ವೆನಿನ್ನು॥ ಲಿಂಗವೆನಿಪುದೆ ತತ್ಪದಂ ತ್ವಂಪದಂ
ತಾನೆ। ಯಂಗಮುಭಯದ ನಿತ್ಯಸಂಯೋಗಮೆನಿಪ ಪದಂ। ಲಿಂಗವೆನಿಪು
ದೆ ನಾದವಂಗವೆನಿಪುದೆ ಬಿಂದು ಸಂಯೋಗವೇ ಚಿತ್ಕಳೆ॥ ೩೯॥ ಲಿಂಗವೇ
ಪರಬೊಮ್ಮವಂಗವೆ ಚಿದಾತ್ಮನಾ। ಸಂಗವೇ ಸಂಯೋಗವೆಂದೆನಿಪುದಾ
ವಿಮಲ। ಲಿಂಗವೇ ಸನ್ಮಾತ್ರವಂಗವೇ ಚಿನ್ಮಾತ್ರವಾನಂದವೇ ಯೋಗ
ವು॥ ಲಿಂಗವೇ ಮಂತ್ರವೇದಾಂಗವೇ ಕ್ರಿಯೆಯುವರ। ಸಂಗವೇ ಸಂಯೋ
ಗವದರಿಂದರಿದು ಮಹಾ। ಲಿಂಗಾಂಗಸಂಯೋಗವೆಂದೆನಿಪುದೆಲೆ ಸಿದ್ಧರಾ
ಮೇಶ ಕೇಳೆಂದನು ॥೪೦॥ ಬರವೆ ನೀ ಸರ್ವಾಂಗಲಿಂಗಸಾಹಿತ್ಯಮಂ।
ಪರಿಕಿಸಲು ಹೃದಯಾಂಗದೊಳು ಮಹಾಲಿಂಗವಾ। ಪರಿಯುಳಿ
ಶ್ರೋತ್ರಾಂಗದೊಳ್ ಪ್ರಸಾದಾಖ್ಯ ಲಿಂಗಂಸತ್ವಗಂಗದಲ್ಲಿ॥ ಚರಲಿಂ
ಗವಾದೃಗಂಗದೊಳೆ ಶಿವಲಿಂಗವಂ। ದಿರದೆ ಜಿಹ್ವಾಂಗದೊಳು ಗುರುಲಿಂ
ಗಮುನ್ನಿರಲ್। ತರದೊಳಾ ನಾಸಿಕಾಂಗದಿ ಸದಾಚಾರಲಿಂಗಾಂಗಳೊಳಿ
ದಿರುತಿರ್ಪವು ॥೪೧॥ ಪರಿವಿಡಿಯೊಳಿಂತು ಸಜ್ಞಾನೇಂದ್ರಿಯಂಗಳ್। ಲ್ಲಿ
ರುವಂತೆ ಲಿಂಗವಾ ಕರ್ಮೇಂದ್ರಿಯಂಗಳ್। ಲ್ಲಿರುತಿರ್ಪವಂತೆ ಸಜ್ಞಾನೇಂ
ದ್ರಿಯಂಗಳೆಲ್ಲೊಂದು ತದ್ವಿಷಯವೊಂದು॥ ಇರದೆ ಕರ್ಮೇಂದ್ರಿಯ
ಲ್ಲೊಂದು ವರವಿಷಯವೊಂ। ದುರುತರದ ಭೂತದಲ್ಲೊಂದಿಂತಿವೃದ
ಕ್ಕ। ಪರಿಕಿಸಲು ಶಿವಮೂರ್ತಿಯಲ್ಲಿ ಬೊಂದಧಿದೈವವೆಲೆ ರಾಮಕೇ
ಳೆಂದನು॥೪೨॥ ಪರಮಸುಜ್ಞಾನೇಂದ್ರಿ ಕರ್ಮೇಂದ್ರಿಯಂಗಳೆಂ। ಬೆರಡ
ಕೊಂದೇ ಮೂರ್ತಿಯಧಿದೈವವಾದುದಂ। ಪರಿವಿಡಿಯೊಳೊರವೆ ನೀ
ಶ್ರೋತ್ರವಾಕ್ಕುಬ್ಧ ವಚನಂಗಗನವೆಂಬಿವಕ್ಕೆ॥ ಪರಿಕಿಸಲ್ಕೀಶಾನಮೂ
ರ್ತಿಯಧಿದೈವವಾ। ಪರಿಯಳಿತ್ವಕ್ಪಾಣಿಸ್ಪರುಶನಾಂಗಳಾ। ಮ
ರುತಂಗೆ ತತ್ಪುರುಷನಧಿದೈವವೆಲೆ ಸಿದ್ಧರಾಮೇಶ ಕೇಳೆಂದನು॥೪೩॥
ಇರದೆ ದೃಕ್ಪಾದ ವಾರೂಪುಗಮನಾಗ್ನಿಗಂ। ಪರಿಕಿಸಲಿಕೆಯಘೋ
ರಮೂರ್ತಿಯಧಿದೈವವ। ತ್ಯುರುತರದ ಜಿಹ್ವೆಗುಹ್ಯಂ ರಸಮು
ಮಾನಂದವಾರಿಗಂ ವಾಮದೇವ॥ ವರಮೂರ್ತಿಯಧಿದೈವಮಿನ್ನು
ನಾಸಿಕಪಾಯು॥ ಗಿರದೆ ಗಂಧ ವಿಸರ್ಜನ ಭೂಮಿಗನ್ನಿರಂ। ತರ
ಟಿ ಸದ್ಯೋಜಾತ ಮೂರ್ತಿಯಧಿದೈವಮಿಂತಿವಕೆ ಹೃದಯವೆ ನೆಲೆ
ವನೆ ॥೪೪॥ ಅಮಕಾರಣಂ ಜ್ಞಾನ ಕರ್ಮೇಂದ್ರಿಯಂಗಳಿಗೆ। ಹೃದ
ಯವೆ ನೆಲೆ ವಿಡುತಿಳಿಯದಾ ಹೃದಯಕ್ಕೆ। ಹೃದಯವಾ ಶ್ರೋತ್ರ
ಕ್ಕೆ ಶ್ರೋತ್ರವಾ ತೊಕ್ಕಂಗೆ ತೊಕ್ಕು ನೇತ್ರಂಗೆ ನೇತ್ರಂ। ಮೃದುಳಜ
ಹ್ವೆ ಜಿಹ್ವೆ ನಾಸಿಕಕೆ ನಾಸಿಕಂ। ಉದಿತವಾಕ್ಕಿಗೆ ವಾಕು ಪಾಣಿಗೆ ಪಾ

ಣಪಾ । ದದಳೆಪಾದಂಗುಹ್ಯಗುಹ್ಯಪಾಯುಗೆಪಾಯುವಾಗಿಹುದು
ಲಿಂಗವುಖವು ॥ ೪೫ ॥ ಪರಮಹೃದಯದಹೃದಯವೇಮಹಾಲಿಂ
ಗವಂ । ಧರದಸೋತ್ರದಸೋತ್ರವೇಪ್ರಸಾದಸುಲಿಂಗ । ಮರುತ
ರದತೊಕ್ಕಿನಸುತೊಕ್ಕುಜಂಗಮಲಿಂಗವೆಸವನೇತ್ರದನೇತ್ರವೆ ॥ ವ
ರದಶಿವಲಿಂಗವಾಜಿಹ್ವೆಯಸುಜಿಹ್ವೆಯೋ । ಗುರುಲಿಂಗವಿನ್ನುನಾ
ಸಿಕದನಾಸಿಕವದೇ । ಪರಿಕಿಸಲ್ಕಾಚಾರಲಿಂಗವಿಂತೆಲೆಸಿದ್ಧರಾಮೇ
ಶಕೇಳೆಂದನು ॥೪೬॥ ಪರಿವಿಡಿಯೊಳಿಂತುಪ್ರವೃತ್ತಿಮಾರ್ಗವುಮಂದೆ
ಪರಿಕಿಸೆನಿವೃತ್ತಿಮಾರ್ಗಾಭಿದಾನವನುಳ್ಳ । ಪರಮಷಟ್ಚಕ್ರಭೇದಂ
ಗಳಂಪೇಳ್ವೆನಾದರದಿಂದೆಕೇಳ್ವುದಿನ್ನು ॥ ನಿರುತದಿಂವಾಧಾರಲಿಂಗ
ನಾಭಿಹೃದಯ । ಸರಸಿಜಂತಾಲುಭ್ರೂಮಧ್ಯವಿಂತಾರವರೊಳೆರ
ಡುಹದಿನಾರುಹನ್ನೆರಡುಹತ್ತಾರುನಾಲ್ಕನಿಸುವದಳಂಗಳಲ್ಲಿ ॥೪೭॥
ವಾಸಾಂತಬಾಲವುದ್ರಾಂಡಫಕಠಾಂತಂಗಳಾಸೇರುವೆಯೊಳಕಾರಾ
ದಿಹಂಕ್ಷಂಗಳಂ । ಬೀಸುತಗ್ಗಳದಕ್ಷರಂಗಳಾಜ್ಞಾದಿಷಟ್ಚಕ್ರಮಧ್ಯ
ದೊಳೊಪ್ಪುವ ॥ ಭಾಸುರಪ್ರಣವಂಯಕಾರಂವಕಾರವರ । ದಾಸ
ವಿಶಾಪಟುಶಿಕಾರಂಮಕಾರಂತಿಳಿಯ । ಲೋಸರಿಸದಾನಕಾರಂಗಳಂ
ಬಾರುಷಟ್ಚಕ್ರಮಧ್ಯದೊಳಿರ್ಪವು ॥೪೮॥ ಬಳಿಕಲಾಚಾರಲಿಂಗವೆ
ನಕಾರಂಮುಂದೆ । ಹೊಳೆವಗುರುಲಿಂಗವೆಮಕಾರವಾಕಣ್ಗೆಥಳ ।
ಥಳಿಪಶಿವಲಿಂಗವೆಶಿಕಾರವಾಚರಲಿಂಗವೇತಿಳಿಯಲುವಕಾರವು ॥ ಬೆ
ಳಗುವಪ್ರಸಾದಲಿಂಗವೆಯಕಾರಂಸಮು । ಜ್ವಲಿಸುವಮಹಾಲಿಂಗವೇ
ಪ್ರಣವಮಿಂತುನಿ । ರ್ಮಳಷಡಕ್ಷರಂಗಳೇಷಡುಲಿಂಗವೆನಿಸಿಷಟ್ಚಕ್ರ
ಮಧ್ಯದೊಳಿರ್ಪವು ॥೪೯॥ ಪರಮಚಿತ್ಪ್ರಣವವೇತ್ವಕ್ಕಿನಲ್ಲಿದೆಯೊ
ಳೊಲ್ । ದಿರುವುದಿಂನಾನಕಾರವೆರುಧಿರದಲ್ಲಿತಾ । ನಿರುವುದುಮಕಾರ
ವೇಮಾಂಸದಲ್ಲಿರುವುದುಶಿಕಾರಮೇದಸ್ಸಿನಲ್ಲಿ ॥ ಇರವುದಿನ್ನುವಕಾ
ರವೆಯಸ್ಥಿಯಲ್ಲಿತಾ । ನಿರುವುದೆಮಕಾರವೇಮಜ್ಜೆಯಲ್ಲಿರುವುದಾ ।
ವರಷಡಕ್ಷರಿಗಳೇಶುಕ್ಲದಲ್ಲಿರುವುದೆಲೆರಾಮೇಶಕೇಳೆಂಗನು ॥೫೦॥
ಇಂತಿದೇಸರ್ವಾಂಗಲಿಂಗಸಂಬಂಧತ್ವವಿಂ । ಮುಂತೆಲಿಂಗಾರ್ಪಣವಿಧಾ
ನವುಂಪೇಳ್ವೆನೋ । ರಂತೆಕ್ರಿಯಾರ್ಪಣವುದೆಂದುಜ್ಞಾನಾರ್ಪಣ
ಮದೆಂದುಭಯಭೇದಂಗಳು ॥ ಎಂತೆನೆಕ್ರಿಯಾರ್ಪಣದಭೇದಮಂ
ತನ್ನಾಗಿ । ಸೀಂತಿಳಿವುದಾತ್ಮೋಪಭೋಗಕ್ಕೆತಕ್ಕದ । ವ್ಯಂತಾ
ನೆಬರಲದೇಮೂರುತೆರನದರಪರಿಯಾಯಮಂಪೇಳ್ವೆನಿನ್ನು ॥೫೧॥
ಸ್ಥೂಲದನ್ಯಾರ್ಪಣಂಸೂಕ್ಷ್ಮದವ್ಯಾರ್ಪಣಂ । ಮೇಲೆಯಾನಂದದ

ವ್ಯಾಪರ್ಣಮಿಂತೀಗಲಾ । ಸ್ಥೂಲದ್ರವ್ಯವೆ ರೂಪು ಸೂಕ್ಷ್ಮದ್ರವ್ಯವೆ ರುಚಿ ಸದಾನಂದವೇ ತೃಪ್ತಿಯು ॥ ಸ್ಥೂಲದ್ರವ್ಯದ ರೂಪನಿಷ್ಟಲಿಂಗಾರ್ಪಣದ । ಲೀಲೆಯಿಂ ಮಾಡುವಾತನೆ ವಿಶ್ವನೊಲವಿನಿಂ । ದಾಲಿಸಾ ಸೂಕ್ಷ್ಮದ್ರವ್ಯದ ರುಚಿಯನೇ ಪ್ರಾಣಲಿಂಗಕರ್ಪಿಸುವಾತನೆ ॥೫೦॥ ಸಲೆ ತೈಜಸಂ ನಿರ್ಮಳಾನಂದದ್ರವ್ಯಮುಮಂ । ನೋಳ್ದು ಸದ್ಭಾವಲಿಂಗಾರ್ಪಣವ ಮಾಳ್ಪನೇ ॥ ನೆಲೆವೆತ್ತ ಪ್ರಾಜ್ಞನಂ ದಿಷ್ಟಲಿಂಗದ ಪ್ರಸಾದವೆ ಶುದ್ಧವೆಂದೆನಿಪುದು॥ ಬಳಿಕಲಾ ಪ್ರಾಣಲಿಂಗದ ಪ್ರಸಾದವೆ ಸಿದ್ಧ । ವಳೆವಟ್ಟ ಭಾವಲಿಂಗದ ಪ್ರಸಾದವೆ ತಾನೆ, ತಿಳಿಯಲು ಪ್ರಸಿದ್ಧನಾಸು ಪ್ರಸಾದಿಗಳೆ ವಿಶ್ವಂ ತೈಜಸಂ ಪ್ರಾಜ್ಞನು ॥೫೧॥ ನಿರುತದಿಂ ಜಾಗ್ರಸ್ವಪ್ನಂ ಸುಷುಪ್ತಿಗಳೊಳಾ। ಪರಮಾತ್ಮನೇ ತ್ರಿವಿಧಭೇದದಿಂ ತ್ರಿವಿಧಸ। ತ್ಪುರಮಲಿಂಗಾರ್ಪಿತ ಪ್ರಸಾದಭೋಗೋಪಭೋಗಂಗಳಿಂ ತುಷ್ಟನಾಗಿ॥ ಪರಮಸುಖದಿಂದೆ ನಿರ್ಲೇಪತ್ವನಾಗಿ ತಾ । ನಿರುತಿರ್ಪನಿಂತಿದೇ ಸತ್ಕ್ರಿಯಾರ್ಪಣವೆಂದು। ಕರುಣದಿಂ ಚನ್ನಬಸವೇಶ ನಾಸಿದ್ಧರಾಮೇಶಂಗೆ ನಿರವಿಸಿದನು ॥೫೨॥ ಒರವೆನಾಲಿಪುದು ಸುಜ್ಞಾನಾರ್ಪಣವನಿನ್ನು । ಪರಿಕಿಸಲು ಸರ್ವೇಂದ್ರಿಯಂಗಳೆ ಮುಖಂಗಳಿಗೆ । ಬರುತಿರ್ಪ ಸಕಲದ್ರವ್ಯಂಗಳಂ ಷಡ್ವಿಧಾತ್ಮಂಗೆ ರೂಪಿಂದಲವನು ॥ ಇರದೆ ಷಡ್ವಿಧಲಿಂಗಮುಖದಿನರ್ಪಿಸಿ ನಿರಂ । ತರ ತತ್ಪ್ರಸಾದಮಂ ಭೋಗಿಸುವರಿನ್ನದರ । ಪರಿಯನಾಲಿಸು ಗಂಧ ರಸ ರೂಪು ಸ್ಪರ್ಶ ವಾಕ್ಶಬ್ದ ಪರಿಣಾಮಂಗಳು ॥೫೩॥ ಇಂತಪ್ಪ ಷಡ್ವಿಷಯವೇ ಷಟ್ಪದಾರ್ಥಂಗ। ಳಿಂತೆನಲು ಗಂಧವೇ ಪರಿಮಳ ಪದಾರ್ಥಮಾ। ಮುಂತೆ ಷಡ್ರಸವೆ ಮಧುರಾದಿ ಸುಪದಾರ್ಥಮಾ ರೂಪವೆ ವರ್ಣಪದಾರ್ಥವು॥ ಮುಂತೆ ಪರುಶವೆ ಮಾರ್ದವಾದಿ ಸುಪದಾರ್ಥಮಾ । ನಂತರಂ ಶಬ್ದವೇ ನಾದ ಸುಪದಾರ್ಥಮೋರಂತೆ ಪರಿಣಾಮವೇ ಸುಖಪದಾರ್ಥಮಿಂತೀಗಲೆಲೆ ರಾಮ ಕೇಳೆಂದನು॥ ಪರಿಯೊಳಿಂತೆ ಸವನಾನಾ ಪದಾರ್ಥಂಗಳೊಳು । ಬೆರಸಿ ಲಿಂಗಾರ್ಪಣಸುಬುದ್ಧಿಯಂ ತಿಳಿದುತ । ತ್ಪರಮಾತ್ಮನೇ ಷಡ್ವಿಧಾಂಗದಿಂ ಷಡ್ವಿಧಸುಲಿಂಗಮುಖದಿಂದರ್ಪಿಸಿ॥ ವರಸುಪ್ರಸಾದಮಂ ಭೋಗಿಸುವನಿಂತಿದರ । ಪರಿಯನೊರವೆಂ ಸುಚಿತ್ತದೊಳಾಲಿಸೆಂದಾಗ। ಕರುಣದಿಂ ಚನ್ನಬಸವೇಶ ನಾಸಿದ್ಧರಾಮೇಶಂಗೆ ನಿರವಿಸಿದನು ॥೫೪॥ ಪರಮ ಸದ್ಭಕ್ತಿಯುತ ಭಕ್ತನೊಲವಿಂ ತನ್ನ । ಧರಣಿಯಂ ಗದಿಕೆಯಾ ಶಕ್ತಿ ಸಂಯುಕ್ತಮಾ । ಗಿರುತಿಹ ಸದಾಚಾರ ಲಿಂಗನಾಸಿಕಮುಖದಿ ಚಿತ್ತದುರುಹಸ್ತದಿಂದಂ ॥ ವರಚಂದನಾದಿ ನಾನಾ ಪರಿಮಳಂಗಳಂ । ಹರುಷಾ

ದಿಂದರ್ಪಿಸಿಸುಗಂಧಪ್ರಸಾದಮಂ। ನಿರುತದಿಂಭೋಗಿಪನೆಸದ್ಭಕ್ತನೆ ಲೆಸಿದ್ಧರಾಮೇಶಕೇಳೆಂದನು ||೫೮|| ಪರಮನಿಷ್ಠಾಭಕ್ತಿಯುತಮಹೇಶನ್ನಿರಂ। ತರಮಾರಿಯಂಗದಿಂಸುಜ್ಞಾನಶಕ್ತಿಯುತ । ಗುರುಲಿಂಗರಸನಮುಖದಿಂದಾಸುಬುದ್ಧಿಯುರುಹಸ್ತದಿಂದನವರತವು || ಹರುಷದಿಂಮಧುರಾದಿಷಡ್ರಸಪದಾರ್ಥಮಂ। ಪರಿಪಡಿಯೊಳುಂಸಮರ್ಪಿಸಿತತ್ಪ್ರಸಾದಮಂ । ಪರಿಣಾಮದಿಂದೆಭೋಗಿಸುವನೇಮಾಹೇಶನೆಲೆರಾಮಕೇಳೆಂದನು ||೫೯|| ಅವಧಾನಭಕ್ತಿಸಂಯುತಸುಪ್ರಸಾದಿಯಾ । ಹವಿಯಂಗದಿಂದಿಚ್ಛಾಶಕ್ತಿಯೊಡನಿಪ್ಪ । ಶಿವಲಿಂಗನೇತ್ರಮುಖದಿಂದೆನಿರಹಂಕಾರಹಸ್ತದಿಂದನವರತವು || ಸುವಿವೇಕದಿಂಶ್ವೇತಮಾದಿಷಡುವರ್ಣದ । ವ್ಯವನೊಲವಿನಿಂದಲರ್ಪಿಸಿತತ್ಪ್ರಸಾದಮಂ । ಸವಿದಾತನೇಸುಪ್ರಸಾದಿಯುಹನೆಲೆಸಿದ್ಧರಾಮೇಶಕೇಳೆಂದನು ||೬೦|| ಹರುಷದಿಂದನುಭಾವಭಕ್ತಿಯಂಕೂಡಿಕೊಂ । ಡಿರುತಿಪ್ಪಸತ್ಪ್ರಾಣಲಿಂಗಿಯೆಂದೆಂಬತ । ನ್ಮರುತಾಂಗದಿಂದಾದಿಶಕ್ತಿಸಂಯುತಮಾದಚರಲಿಂಗತನ್ಮುಖದೊಳು|| ನಿರುತದಿಂದಾಸುಮನಹಸ್ತದಿಂಮೃದುಮಾದಿ । ಪರುಶನಪದಾರ್ಥಮುಮನರ್ಪಿಸಿಪದಾರ್ಥಮಂ। ಪರಿಣಾಮದಿಂದೆಭೋಗಿಸುವಾತನೇಪ್ರಾಣಲಿಂಗಿನೀಂಕೇಳೆಂದನು||೬೧|| ನಿರುತದಿಂದಾನಂದಭಕ್ತಿಸಂಯುತವಾದ । ಶರಣನೇವ್ಯೋಮಾಂಗದಿಂಪರಾಶಕ್ತಿಯೊಡೆ, ನಿರುವಪ್ರಸಾದಲಿಂಗದಸೋತ್ರಮುಖದಿನಾಸುಜ್ಞಾನಹಸ್ತದಿಂದೆ || ವರಸುನಾದದ್ರವ್ಯಮುಂಸಮರ್ಪಿಸಿನಿರಂ।, ತರಸುಪ್ರಸಾದಮಂಸೇವಿಸುತಿರ್ಪನೇ । ಶರಣನೆಂದಾಗಲಾಚೆನ್ನಬಸವಂಸಿದ್ಧರಾಮಂಗನಿರವಿಸಿದನು ||೬೨|| ಎಸವಸಮರಸಭಕ್ತಿಯುಕ್ತನಾದೈಕ್ಯನಾ । ಪಸರಿಸುವಪರಮಾತ್ಮನೆಂದೆನಿಸುವಂಗದಿಂ । ಮಿಸುಪಚಿಚ್ಛಕ್ತಿಸಂಯುತಮಹಾಲಿಂಗಹೃನ್ಮುಖದಿಂದಲನವರತವು|| ಹಸನಾದಸದ್ಭಾವಹಸ್ತದಿಂಪರಿಣಾಮ । ದೆಸಕದಪದಾರ್ಥಮುಮನರ್ಪಿಸಿಬಳಿಕ್ಕಸಂ । ತಸದೊಳಾಸುಪ್ರಸಾದವಭೋಗಿಸುವನೈಕ್ಯನೆಲೆರಾಮಕೇಳೆಂದನು ||೬೩|| ಪರಿಪಿಡಿಯೊಳಿಂತೊಪ್ಪುವಂಗಮುಂಲಿಂಗಮುಂ। ಹರುಷದಿಂದಿರ್ಪಸದ್ಭಕ್ತಿಯುಂಶಕ್ತಿಯುಂ । ನಿರುತದಿಂದೆಸವತದ್ವದನಮುಂಹಸ್ತಮುಮ ನರ್ಪಿತವಸಾದಂಗಳುಂ|| ಪರಿಕಿಸಲ್ಕಂಟುತೆರದಿಂಪ್ರತಿಸ್ಥಳಗಳ । ಲ್ಲಿರುತಿರ್ಪವಿಂತಪ್ಪಷಟ್ಸ್ಥಲಂತಿಳಿಯೆಂದು। ಕರುಣದಿಂಚೆನ್ನಬಸವೇಶನಾಸಿದ್ಧರಾಮೇಶಂಗನಿರವಿಸಿದನು ||೬೪|| ಎಸವಸತ್ತ್ವೀಯಂಗಲಿಂಗವೆಂ

